(ii) ಇವರು ಅರ್ಹತಾ ಪರೀಕ್ಷೆಯಲ್ಲಿ ಶೇ.55 ಅಂಕಗಳನ್ನು ಪಡೆದಿರತಕ್ಕದ್ದು.

(iii) ವಿಲೀನಗೊಂಡ ಈ ಅರೆಕಾಲಿಕ ಉಪನ್ಯಾಸಕರು ಎನ್.ಇ.ಟಿ. / ಎಸ್.ಎಲ್.ಇ.ಟಿ.ಯನ್ನು ಪಾಸು ಮಾಡಲು ದಿನಾಂಕ: 12-02-2007ರವರೆಗೆ ಕಾಲಾವಕಾಶ ನೀಡಲಾಗಿದೆ. ಈ ಅವಧಿಯಲ್ಲಿ ಇವರು ಎನ್.ಇ.ಟಿ. / ಎಸ್.ಎಲ್.ಇ.ಟಿ.ಯನ್ನು ಪಾಸು ಮಾಡಿದಲ್ಲಿ ಇವರು ಇತರ ಅರ್ಹ ಉಪನ್ಯಾಸಕರಿಗೆ ಲಭ್ಯವಾಗುವ ಯು.ಜಿ.ಸಿ. ವೇತನ ಶ್ರೇಣಿ ಪಡೆಯಲು ಅರ್ಹರಾಗುತ್ತಾರೆ. ಇವರು ಎನ್.ಇ.ಟಿ. / ಎಸ್.ಎಲ್.ಇ.ಟಿ.ಯನ್ನು ದಿನಾಂಕ: 12-02-2007ರೊಳಗೆ ಪಾಸು ಮಾಡದಿದ್ದಲ್ಲಿ ಇವರನ್ನು ಕರ್ನಾಟಕ ಶಿಕ್ಷಣ ಸಂಸ್ಥೆಗಳು (ಅನುದಾನಿತ ಖಾಸಗಿ ಶಿಕ್ಷಣ ಸಂಸ್ಥೆಗಳಲ್ಲಿ ಕಾರ್ಯನಿರ್ವಹಿಸುತ್ತಿರುವ ಅರೆಕಾಲಿಕ ಉಪನ್ಯಾಸಕರ ಸೇವಾ ವಿಲೀನತೆ)(ವಿಶೇಷ) ನಿಯಮಗಳು 2003ರ ನಿಯಮ 6ರನ್ವಯ ಸೇವೆಯಿಂದ ತೆಗೆದುಹಾಕಲಾಗುವುದು.

(iv) ಎನ್.ಇ.ಟಿ. / ಎಸ್.ಎಲ್.ಇ.ಟಿ. ಯನ್ನು ನಿಗಧಿತ ಅವಧಿಯೊಳಗೆ ಪಾಸುಮಾಡದಿದ್ದಲ್ಲಿ ಅವರುಗಳನ್ನು ಸೇವೆಯಿಂದ ತೆಗೆದು ಹಾಕಲಾಗುವುದೆಂದು ಅವರ ಗಮನಕ್ಕೆ ಬಂದಿದೆಯೆಂದು ರೂ.20ರ ಛಾಪಾ ಕಾಗದದಲ್ಲಿ ಮುಚ್ಚಳಿಕೆಯನ್ನು ಕಾಲೇಜು ಶಿಕ್ಷಣ ಆಯುಕ್ತರು ಸಂಬಂಧಿಸಿದ ಅಭ್ಯರ್ಥಿಗಳಿಂದ ಪಡೆದುಕೊಳ್ಳತಕ್ಕದ್ದು.

(v) ಆಯಾ ಕಾಲೇಜಿನ ಪ್ರಾಂಶುಪಾಲರುಗಳು, ಅವರುಗಳ ವಿದ್ಯಾರ್ಹತೆ, ಜನ್ಮ ದಿನಾಂಕ, ಜಾತಿ / ಮೀಸಲಾತಿ ಇವುಗಳ ಬಗ್ಗೆ ಮೂಲ ದಾಖಲೆಗಳನ್ನು ಪರಿಶೀಲಿಸಿ ಖಾತ್ರಿಪಡಿಸಿಕೊಳ್ಳತಕ್ಕದ್ದು. ಪರಿಶೀಲಿಸಿದ ಬಗ್ಗೆ ದೃಢೀಕರಿಸಿದ ಪ್ರಮಾಣ ಪತ್ರವನ್ನು ಅವರ ಸೇವಾ ಪುಸ್ತಕದಲ್ಲಿ ದಾಖಲಿಸತಕ್ಕದ್ದು.

2. ಈ ಅಧಿಸೂಚನೆಗೆ ಲಗತ್ತಿಸಿರುವ ಅನುಬಂಧ-2ರಲ್ಲಿ ಕಾಣಿಸಿರುವ ಖಾಸಗಿ ಅನುದಾನಿತ ಪದವಿ ಕಾಲೇಜುಗಳಲ್ಲಿನ ಎನ್.ಇ.ಟಿ. / ಎಸ್.ಎಲ್.ಇ.ಟಿ. / ಪಿ.ಹೆಚ್.ಡಿ. / ಎಂ.ಫಿಲ್‌ನ್ನು ಇನ್ನೂ ಪಾಸು ಮಾಡದಿರುವ ಅರೆಕಾಲಿಕ ಉಪನ್ಯಾಸಕರಿಗೆ ಸಂಬಂಧಿಸಿದ ಕಾಲೇಜಿನಲ್ಲಿ ಅಗತ್ಯ ಕಾರ್ಯಭಾರ ಹಾಗೂ ಮಂಜೂರಾದ ಖಾಲಿ ಹುದ್ದೆ ಇಲ್ಲದಿರುವ ಪ್ರಯುಕ್ತ ಅವರು ಇತರೆ ಆಡಳಿತ ಮಂಡಳಿಗಳಿಂದ ಸೇವಾ ವಿಲೀನತೆಗೆ ನಿರಾಕ್ಷೇಪಣಾ ಪತ್ರ ಪಡೆದು ಸಲ್ಲಿಸಿರುವುದರಿಂದ, ಇವರ ಸೇವೆಯನ್ನು ಕರ್ನಾಟಕ ಶಿಕ್ಷಣ ಸಂಸ್ಥೆಗಳು (ಅನುದಾನಿತ ಖಾಸಗಿ ಶಿಕ್ಷಣ ಸಂಸ್ಥೆಗಳಲ್ಲಿ ಕಾರ್ಯನಿರ್ವಹಿಸುತ್ತಿರುವ ಅರೆಕಾಲಿಕ ಉಪನ್ಯಾಸಕರ ಸೇವಾ ವಿಲೀನತೆ (ವಿಶೇಷ) ನಿಯಮಗಳು 2003ರಡಿಯಲ್ಲಿನ ಅವಕಾಶ ಮತ್ತು ಇದಕ್ಕೆ ಸಂಬಂಧಿಸಿದಂತೆ ಹೊರಡಿಸಲ್ಪಟ್ಟ ಸ್ಪಷ್ಟೀಕರಣ / ಮಾರ್ಗಸೂಚಿಗಳನ್ವಯ ಈ ನಿಯಮಾವಳಿ ಮತ್ತು ಸ್ಪಷ್ಟೀಕರಣ ಮಾರ್ಗಸೂಚಿಗಳಿಗೆ ಹಾಗೂ ಈ ಕೆಳಕಂಡ ಷರತ್ತುಗಳಿಗೆ ಬದ್ಧವಾಗಿರುವ ಷರತ್ತಿಗೊಳಪಡಿಸಿ ತಕ್ಷಣದಿಂದ ಜಾರಿಗೆ ಬರುವಂತೆ ನಿರಾಕ್ಷೇಪಣಾ ಪತ್ರ ನೀಡಿದ ಖಾಸಗಿ ಅನುದಾನಿತ ಪದವಿ ಕಾಲೇಜುಗಳಲ್ಲಿ ರಾಜ್ಯ ವೇತನ ಶ್ರೇಣಿ ರೂ.6000-11200 ನಲ್ಲಿನ ಉಪನ್ಯಾಸಕರ ಖಾಲಿ ಹುದ್ದೆಗಳಲ್ಲಿ ವಿಲೀನಗೊಳಿಸಲಾಗಿದೆ.

(i) ಇವರುಗಳ ನೇಮಕಾತಿ ತಾತ್ಕಾಲಿಕವಾಗಿದ್ದು, ಜಾರಿಯಲ್ಲಿರುವ ಸೇವಾ ಷರತ್ತುಗಳ ನಿಯಮ / ಆದೇಶಗಳ ಅಧೀನಕ್ಕೆ ಒಳಪಟ್ಟಿರುತ್ತದೆ.

(ii) ಇವರು ಅರ್ಹತಾ ಪರೀಕ್ಷೆಯಲ್ಲಿ ಶೇ.55 ಅಂಕಗಳನ್ನು ಪಡೆದಿರತಕ್ಕದ್ದು.

(iii) ವಿಲೀನಗೊಂಡ ಈ ಅರೆಕಾಲಿಕ ಉಪನ್ಯಾಸಕರು ಎನ್.ಇ.ಟಿ. / ಎಸ್.ಎಲ್.ಇ.ಟಿ.ಯನ್ನು ಪಾಸು ಮಾಡಲು ದಿನಾಂಕ: 12-02-2007ರವರೆಗೆ ಕಾಲಾವಕಾಶ ನೀಡಲಾಗಿದೆ. ಈ ಅವಧಿಯಲ್ಲಿ ಇವರು ಎನ್.ಇ.ಟಿ. / ಎಸ್.ಎಲ್.ಇ.ಟಿ.ಯನ್ನು ಪಾಸು ಮಾಡಿದಲ್ಲಿ ಇವರು ಇತರ ಅರ್ಹ ಉಪನ್ಯಾಸಕರಿಗೆ ಲಭ್ಯವಾಗುವ ಯು.ಜಿ.ಸಿ. ವೇತನ ಶ್ರೇಣಿ ಪಡೆಯಲು ಅರ್ಹರಾಗುತ್ತಾರೆ. ಇವರು ಎನ್.ಇ.ಟಿ. / ಎಸ್.ಎಲ್.ಇ.ಟಿ.ಯನ್ನು ದಿನಾಂಕ: 12-02-2007ರೊಳಗೆ ಪಾಸು ಮಾಡದಿದ್ದಲ್ಲಿ ಇವರನ್ನು ಕರ್ನಾಟಕ ಶಿಕ್ಷಣ ಸಂಸ್ಥೆಗಳು (ಅನುದಾನಿತ ಖಾಸಗಿ ಶಿಕ್ಷಣ ಸಂಸ್ಥೆಗಳಲ್ಲಿ ಕಾರ್ಯನಿರ್ವಹಿಸುತ್ತಿರುವ ಅರೆಕಾಲಿಕ ಉಪನ್ಯಾಸಕರ ಸೇವಾ ವಿಲೀನತೆ)(ವಿಶೇಷ) ನಿಯಮಗಳು 2003ರ ನಿಯಮ 6ರನ್ವಯ ಸೇವೆಯಿಂದ ತೆಗೆದುಹಾಕಲಾಗುವುದು.

(iv) ಎನ್.ಇ.ಟಿ. / ಎಸ್.ಎಲ್.ಇ.ಟಿ. ನಿಗಧಿತ ಅವಧಿಯೊಳಗೆ ತೇರ್ಗಡೆಯಾಗದಿದ್ದಲ್ಲಿ ಅವರುಗಳನ್ನು ಸೇವೆಯಿಂದ ತೆಗೆದು ಹಾಕಲಾಗುವುದೆಂದು ಅವರ ಗಮನಕ್ಕೆ ಬಂದಿದೆಯೆಂದು ರೂ.20ರ ಛಾಪಾ ಕಾಗದದಲ್ಲಿ ಮುಚ್ಚಳಿಕೆಯನ್ನು ಕಾಲೇಜು ಶಿಕ್ಷಣ ಆಯುಕ್ತರು ಸಂಬಂಧಿಸಿದ ಅಭ್ಯರ್ಥಿಗಳಿಂದ ಪಡೆದುಕೊಳ್ಳತಕ್ಕದ್ದು.

(v) ಆಯಾ ಕಾಲೇಜಿನ ಪ್ರಾಂಶುಪಾಲರುಗಳು, ಅವರುಗಳ ವಿದ್ಯಾರ್ಹತೆ, ಜನ್ಮ ದಿನಾಂಕ, ಜಾತಿ / ಮೀಸಲಾತಿ ಇವುಗಳ ಬಗ್ಗೆ ಮೂಲ ದಾಖಲೆಗಳನ್ನು ಪರಿಶೀಲಿಸಿ ಖಾತ್ರಿಪಡಿಸಿಕೊಳ್ಳತಕ್ಕದ್ದು. ಪರಿಶೀಲಿಸಿದ ಬಗ್ಗೆ ದೃಢೀಕರಿಸಿದ ಪ್ರಮಾಣ ಪತ್ರವನ್ನು ಅವರ ಸೇವಾ ಪುಸ್ತಕದಲ್ಲಿ ದಾಖಲಿಸತಕ್ಕದ್ದು.

3. ಈ ಅಧಿಸೂಚನೆಗೆ ಲಗತ್ತಿಸಿರುವ ಅನುಬಂಧ-3ರಲ್ಲಿ ಕಾಣಿಸಿರುವ ಖಾಸಗಿ ಅನುದಾನಿತ ಪದವಿ ಕಾಲೇಜುಗಳಲ್ಲಿನ ಅರೆಕಾಲಿಕ ಉಪನ್ಯಾಸಕರ ಸೇವೆಯನ್ನು ಖಾಸಗಿ ಅನುದಾನಿತ ಪದವಿ ಪೂರ್ವ ಕಾಲೇಜುಗಳು ಖಾಸಗಿ ಅನುದಾನಿತ ಪದವಿ ಕಾಲೇಜುಗಳಿಂದ ಇನ್ನು ಪೂರ್ಣವಾಗಿ ಬೇರ್ಪಡಿಸಲ್ಪಟ್ಟಿಲ್ಲವಾದ್ದರಿಂದ ಕರ್ನಾಟಕ ಶಿಕ್ಷಣ ಸಂಸ್ಥೆಗಳು (ಅನುದಾನಿತ ಖಾಸಗಿ ಶಿಕ್ಷಣ ಸಂಸ್ಥೆಗಳಲ್ಲಿ ಕಾರ್ಯ ನಿರ್ವಹಿಸುತ್ತಿರುವ ಅರೆಕಾಲಿಕ ಉಪನ್ಯಾಸಕರ ಸೇವಾ ವಿಲೀನತೆ)(ವಿಶೇಷ) ನಿಯಮಗಳು 2003 ಮತ್ತು ಇದಕ್ಕೆ ಮುಂದುವರೆದಂತೆ ಹೊರಡಿಸಲ್ಪಟ್ಟ ಸ್ಪಷ್ಟೀಕರಣ / ಮಾರ್ಗಸೂಚಿಗಳನ್ವಯ ಈ ನಿಯಮಾವಳಿ ಮತ್ತು ಸ್ಪಷ್ಟೀಕರಣ ಮಾರ್ಗಸೂಚಿಗಳಿಗೆ ಹಾಗೂ ಈ ಕೆಳಕಂಡ ಷರತ್ತುಗಳಿಗೆ ಬದ್ಧವಾಗಿರುವ ಷರತ್ತಿಗೊಳಪಡಿಸಿ ತಕ್ಷಣದಿಂದ ಜಾರಿಗೆ ಬರುವಂತೆ ಸಂಬಂಧಿಸಿದ ಖಾಸಗಿ ಅನುದಾನಿತ ಪದವಿ ಪೂರ್ವ ಕಾಲೇಜುಗಳಲ್ಲಿ ರಾಜ್ಯ ವೇತನ ಶ್ರೇಣಿ ರೂ.6000-11200 ನಲ್ಲಿನ ಉಪನ್ಯಾಸಕರ ಖಾಲಿ ಹುದ್ದೆಗಳಲ್ಲಿ ವಿಲೀನಗೊಳಿಸಲಾಗಿದೆ.

(i) ಇವರುಗಳ ನೇಮಕಾತಿ ತಾತ್ಕಾಲಿಕವಾಗಿದ್ದು, ಜಾರಿಯಲ್ಲಿರುವ ಸೇವಾ ಷರತ್ತುಗಳ ನಿಯಮ / ಆದೇಶಗಳ ಅಧೀನಕ್ಕೆ ಒಳಪಟ್ಟಿರುತ್ತದೆ.

(ii) ಇವರು ಅರ್ಹತಾ ಪರೀಕ್ಷೆಯಲ್ಲಿ ಶೇ.55 ಅಂಕಗಳನ್ನು ಪಡೆದಿರತಕ್ಕದ್ದು.

(iii) ಆಯಾ ಕಾಲೇಜಿನ ಪ್ರಾಂಶುಪಾಲರುಗಳು, ಅವರುಗಳ ವಿದ್ಯಾರ್ಹತೆ, ಜನ್ಮ ದಿನಾಂಕ, ಜಾತಿ / ಮೀಸಲಾತಿ ಇವುಗಳ ಬಗ್ಗೆ ಮೂಲ ದಾಖಲೆಗಳನ್ನು ಪರಿಶೀಲಿಸಿ ಖಾತ್ರಿಪಡಿಸಿಕೊಳ್ಳತಕ್ಕದ್ದು. ಪರಿಶೀಲಿಸಿದ ಬಗ್ಗೆ ದೃಢೀಕರಿಸಿದ ಪ್ರಮಾಣ ಪತ್ರವನ್ನು ಅವರ ಸೇವಾ ಪುಸ್ತಕದಲ್ಲಿ ದಾಖಲಿಸತಕ್ಕದ್ದು.

4. ಈ ಅಧಿಸೂಚನೆಗೆ ಲಗತ್ತಿಸಿರುವ ಅನುಬಂಧ-4ರಲ್ಲಿ ಕಾಣಿಸಿರುವ ಖಾಸಗಿ ಅನುದಾನಿತ ಪದವಿ ಕಾಲೇಜುಗಳಲ್ಲಿನ ಅರೆಕಾಲಿಕ ಉಪನ್ಯಾಸಕರ ಸೇವೆಯನ್ನು ಖಾಸಗಿ ಅನುದಾನಿತ ಪದವಿ ಪೂರ್ವ ಕಾಲೇಜುಗಳು ಖಾಸಗಿ ಅನುದಾನಿತ ಪದವಿ ಕಾಲೇಜುಗಳಿಂದ ಇನ್ನು ಪೂರ್ಣವಾಗಿ ಬೇರ್ಪಡಿಸಲ್ಪಟ್ಟಿಲ್ಲವಾದ್ದರಿಂದ ಮತ್ತು ಈ ಅರೆಕಾಲಿಕ ಉಪನ್ಯಾಸಕರಿಗೆ ಸಂಬಂಧಿಸಿದ ಕಾಲೇಜಿನಲ್ಲಿ ಅಗತ್ಯ ಕಾರ್ಯಭಾರ / ಮಂಜೂರಾದ ಖಾಲಿ ಹುದ್ದೆ ಇಲ್ಲದಿರುವ ಪ್ರಯುಕ್ತ ಅವರು ಇತರೆ ಆಡಳಿತ ಮಂಡಳಿಗಳಿಂದ ಸೇವಾ ವಿಲೀನತೆಗೆ ನಿರಾಕ್ಷೇಪಣಾ ಪತ್ರ ಪಡೆದು ಸಲ್ಲಿಸಿರುವುದರಿಂದ, ಕರ್ನಾಟಕ ಶಿಕ್ಷಣ ಸಂಸ್ಥೆಗಳು (ಅನುದಾನಿತ ಖಾಸಗಿ ಶಿಕ್ಷಣ ಸಂಸ್ಥೆಗಳಲ್ಲಿ ಕಾರ್ಯ ನಿರ್ವಹಿಸುತ್ತಿರುವ ಅರೆಕಾಲಿಕ ಉಪನ್ಯಾಸಕರ ಸೇವಾ ವಿಲೀನತೆ)(ವಿಶೇಷ) ನಿಯಮಗಳು 2003 ಮತ್ತು ಇದಕ್ಕೆ ಮುಂದುವರೆದಂತೆ ಹೊರಡಿಸಲ್ಪಟ್ಟ ಸ್ಪಷ್ಟೀಕರಣ / ಮಾರ್ಗಸೂಚಿಗಳನ್ವಯ ಈ ನಿಯಮಾವಳಿ ಮತ್ತು ಸ್ಪಷ್ಟೀಕರಣ ಮಾರ್ಗಸೂಚಿಗಳಿಗೆ ಹಾಗೂ ಈ ಕೆಳಕಂಡ ಷರತ್ತುಗಳಿಗೆ ಬದ್ಧವಾಗಿರುವ ಷರತ್ತಿಗೊಳಪಡಿಸಿ ತಕ್ಷಣದಿಂದ ಜಾರಿಗೆ ಬರುವಂತೆ ನಿರಾಕ್ಷೇಪಣಾ ಪತ್ರ ನೀಡಿದ ಖಾಸಗಿ ಅನುದಾನಿತ ಪದವಿ ಪೂರ್ವ ಕಾಲೇಜುಗಳಲ್ಲಿ ರಾಜ್ಯ ವೇತನ ಶ್ರೇಣಿ ರೂ.6000-11200 ನಲ್ಲಿನ ಉಪನ್ಯಾಸಕರ ಖಾಲಿ ಹುದ್ದೆಗಳಲ್ಲಿ ವಿಲೀನಗೊಳಿಸಲಾಗಿದೆ.

(i) ಇವರುಗಳ ನೇಮಕಾತಿ ತಾತ್ಕಾಲಿಕವಾಗಿದ್ದು, ಜಾರಿಯಲ್ಲಿರುವ ಸೇವಾ ಷರತ್ತುಗಳ ನಿಯಮ / ಆದೇಶಗಳ ಅಧೀನಕ್ಕೆ ಒಳಪಟ್ಟಿರುತ್ತದೆ.

(ii) ಇವರು ಅರ್ಹತಾ ಪರೀಕ್ಷೆಯಲ್ಲಿ ಶೇ.55 ಅಂಕಗಳನ್ನು ಪಡೆದಿರತಕ್ಕದ್ದು.

(iii) ಆಯಾ ಕಾಲೇಜಿನ ಪ್ರಾಂಶುಪಾಲರುಗಳು, ಅವರುಗಳ ವಿದ್ಯಾರ್ಹತೆ, ಜನ್ಮ ದಿನಾಂಕ, ಜಾತಿ / ಮೀಸಲಾತಿ ಇವುಗಳ ಬಗ್ಗೆ ಮೂಲ ದಾಖಲೆಗಳನ್ನು ಪರಿಶೀಲಿಸಿ ಖಾತ್ರಿಪಡಿಸಿಕೊಳ್ಳತಕ್ಕದ್ದು. ಪರಿಶೀಲಿಸಿದ ಬಗ್ಗೆ ದೃಢೀಕರಿಸಿದ ಪ್ರಮಾಣ ಪತ್ರವನ್ನು ಅವರ ಸೇವಾ ಪುಸ್ತಕದಲ್ಲಿ ದಾಖಲಿಸತಕ್ಕದ್ದು.

3. ಈ ಆದೇಶದಲ್ಲಿ ಕಾಣಿಸಿರುವ ಸೇವಾ ಜೇಷ್ಠತೆಯಲ್ಲಿ ನ್ಯೂನತೆಗಳು ಕಂಡು ಬಂದಲ್ಲಿ ಸರಿಪಡಿಸುವ ಷರತ್ತಿಗೆ ಒಳಪಟ್ಟಿರುತ್ತದೆ.

4. ಈ ಅರೆಕಾಲಿಕ ಉಪನ್ಯಾಸಕರುಗಳು ಈ ಆದೇಶ ಸ್ವೀಕರಿಸಿದ 15 ದಿನಗಳೊಳಗಾಗಿ ಆಯಾಯ ಕಾಲೇಜುಗಳಲ್ಲಿ ಕರ್ತವ್ಯಕ್ಕೆ ವರದಿ ಮಾಡಿಕೊಳ್ಳತಕ್ಕದ್ದು. ತಪ್ಪಿದಲ್ಲಿ ಅವರ ನೇಮಕಾತಿ ತಂತಾನೆ ರದ್ದುಗೊಳ್ಳುತ್ತದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ.ಎಸ್.ವೇಣುಗೋಪಾಲ್**

ಸರ್ಕಾರದ ಅಧೀನ ಕಾರ್ಯದರ್ಶಿ, ಶಿಕ್ಷಣ ಇಲಾಖೆ

**ಸರ್ಕಾರಿ ಆದೇಶ ಸಂಖ್ಯೆ: ಇಡಿ 95 ಯುಪಿಸಿ 2006 ದಿನಾಂಕ: 30ನೇ ಜೂನ್ 2006ರ ಅನುಬಂಧ-1**

ಕಾಲೇಜು ಶಿಕ್ಷಣ ಇಲಾಖೆ ವ್ಯಾಪ್ತಿಯಲ್ಲಿ ಬರುವ ಖಾಸಗಿ ಅನುದಾನಿತ ಕಾಲೇಜುಗಳಲ್ಲಿ 1993-94 ಹಾಗೂ 1994-95ನೇ ಸಾಲಿನಲ್ಲಿ ಪದವಿ ಕಾಲೇಜುಗಳಲ್ಲಿ ಅರೆಕಾಲಿಕ ಉಪನ್ಯಾಸಕರಾಗಿ ಕರ್ತವ್ಯ ನಿರ್ವಹಿಸುತ್ತಿರುವ ಅಭ್ಯರ್ಥಿಗಳು ಅದೇ ಕಾಲೇಜಿನಲ್ಲಿ ಕಾರ್ಯಭಾರವಿದ್ದು, **ರಾಜ್ಯ ವೇತನ ಶ್ರೇಣಿ ರೂ. 6000-11200**ರಲ್ಲಿ ಸೇವಾ ವಿಲೀನತೆಗೊಳಿಸಿರುವ ಅರ್ಹ ಅಭ್ಯರ್ಥಿಗಳ ಪಟ್ಟಿ.

| ಕ್ರ ಸಂ. | ಕಾಲೇಜು / ಆಡಳಿತ ಮಂಡಳಿ ಹೆಸರು | ಅಭ್ಯರ್ಥಿಯ ಹೆಸರು ಶ್ರೀ / ಶ್ರೀಮತಿ | ಬೋಧಿ ಸುತ್ತಿರುವ ವಿಷಯ | ಜನ್ಮ ದಿನಾಂಕ | ಮೀಸಲಾತಿ |
|---|---|---|---|---|---|
| 1 | 2 | 3 | 4 | 5 | 6 |
| 1. | ಶರಣಬಸವೇಶ್ವರ ಕಾಲೇಜು, ಗುಲ್ಬರ್ಗಾ | ಶಿವರಾಜ ಜಿ. ಪಾಟೀಲ್ | ಕನ್ನಡ | 07–08–1968 | ಸಾಮಾನ್ಯ |
| 2. | ಶ್ರೀ ಪ್ರಭು ಕಾಲೇಜು, ಸುರಪುರ | ಬಾಲರಾಜ ಷರಾಫ್ | ಅರ್ಥಶಾಸ್ತ್ರ | 20–03–1970 | 3–ಎ |
| 3. | ಆರ್.ಟಿ.ಇ.ಎಸ್. ಕಾಲೇಜು, ರಾಣೆಬೆನ್ನೂರು | ಡಾಕಪ್ಪ ತುಳಜಪ್ಪ ಲಮಾಣಿ | ಕನ್ನಡ | 20–07–1964 | ಸಾಮಾನ್ಯ |
| 4. | ಎಸ್.ಪಿ.ಎಂ.ಕೆ. ಕಾಲೇಜು, ರಾಯಭಾಗ, ಬೆಳಗಾವಿ | ಇಟ್ಟಪ್ಪ ಸಿದ್ದಪ್ಪ ಗೋಕಾಕ್ | ಸಂಖ್ಯಾಶಾಸ್ತ್ರ | 24–09–1961 | 3–ಎ |

**ಕೆ.ಎಸ್.ವೇಣುಗೋಪಾಲ್**
ಸರ್ಕಾರದ ಅಧೀನ ಕಾರ್ಯದರ್ಶಿ, ಶಿಕ್ಷಣ ಇಲಾಖೆ

**ಸರ್ಕಾರಿ ಆದೇಶ ಸಂಖ್ಯೆ: ಇಡಿ 95 ಯುಪಿಸಿ 2006 ದಿನಾಂಕ: 30ನೇ ಜೂನ್ 2006ರ ಅನುಬಂಧ–2**

ಕಾಲೇಜು ಶಿಕ್ಷಣ ಇಲಾಖೆ ವ್ಯಾಪ್ತಿಯಲ್ಲಿ ಬರುವ ಖಾಸಗಿ ಅನುದಾನಿತ ಕಾಲೇಜುಗಳಲ್ಲಿ 1993–94 ಹಾಗೂ 1994–95ನೇ ಸಾಲಿನಲ್ಲಿ ಪದವಿ ಕಾಲೇಜುಗಳಲ್ಲಿ ಅರೆಕಾಲಿಕ ಉಪನ್ಯಾಸಕರಾಗಿ ಕರ್ತವ್ಯ ನಿರ್ವಹಿಸುತ್ತಿರುವ ಅಭ್ಯರ್ಥಿಗಳು ಅದೇ ಕಾಲೇಜಿನಲ್ಲಿ ಕಾರ್ಯಭಾರವಿಲ್ಲದ ಪ್ರಯುಕ್ತ **ಬೇರೊಂದು ಪದವಿ ಕಾಲೇಜುಗಳಿಂದ ನಿರಾಕ್ಷೇಪಣಾ ಪತ್ರ ಸಲ್ಲಿಸಿರುವ ಅಭ್ಯರ್ಥಿಗಳನ್ನು ರಾಜ್ಯ ವೇತನ ಶ್ರೇಣಿ ರೂ. 6000–11200 ರಲ್ಲಿ** ಸೇವಾ ವಿಲೀನತೆಗೊಳಿಸಿರುವ ಅರ್ಹ ಅಭ್ಯರ್ಥಿಗಳ ಪಟ್ಟಿ.

| ಕ್ರ ಸಂ. | ಕಾಲೇಜು / ಆಡಳಿತ ಮಂಡಳಿ ಹೆಸರು | ಬೇರೆ ಆಡಳಿತ ಮಂಡಳಿಗಳಿಂದ / ಕಾಲೇಜುಗಳಿಂದ ನಿರಾಕ್ಷೇಪಣಾ ಪತ್ರ ತಂದಿರುವ ಕಾಲೇಜಿನ ಹೆಸರು | ಅಭ್ಯರ್ಥಿಯ ಹೆಸರು ಶ್ರೀ / ಶ್ರೀಮತಿ | ಬೋಧಿ ಸುತ್ತಿರುವ ವಿಷಯ | ಜನ್ಮ ದಿನಾಂಕ | ಮೀಸ ಲಾತಿ |
|---|---|---|---|---|---|---|
| 1 | 2 | 3 | 4 | 5 | 6 | 7 |
| 1. | ಎಸ್.ಜೆ.ಎಂ.ವಿ. ಕಾಲೇಜು, ಚಿತ್ರದುರ್ಗ | ಎಸ್.ಜೆ.ವಿ.ಪಿ. ಹರಿಹರ | ಆರ್.ಎಸ್. ಸಂಕಣ್ಣಗೌಡರು | ಕನ್ನಡ | 26–11–1960 | ಸಾಮಾನ್ಯ |
| 2. | ಕಮಲಾ ನೆಹರು ಕಾಲೇಜು, ಶಿವಮೊಗ್ಗ | ಕೆ.ಎಲ್.ಇ. ಸಂಸ್ಥೆ, ಬೆಳಗಾಂ | ಶಶಿಕಲಾ ಎಂ.ಸಿ. | ರಾಜ್ಯಶಾಸ್ತ್ರ | 01–07–1962 | 3ಬಿ |
| 3. | ಡಾ: ಬಿ.ಆರ್. ಅಂಬೇಡ್ಕರ್ ಕಾಲೇಜು, ಗುಲ್ಬರ್ಗಾ | ಶ್ರೀ ಓಲಬಳ್ಳಾರಿ ಚನ್ನಬಸವೇಶ್ವರ ಶಿಕ್ಷಣ ಸಂಸ್ಥೆ (ರಿ), ಲಿಂಗಸೂರು | ಭೀಮಪ್ಪ | ವಾಣಿಜ್ಯ ಶಾಸ್ತ್ರ | 20–05–1969 | ಪರಿಶಿಷ್ಟ ಜಾತಿ |
| 4. | ಶರಣಬಸವೇಶ್ವರ ಕಲಾ ಮಹಾ ವಿದ್ಯಾಲಯ, ಗುಲ್ಬರ್ಗಾ | ಶ್ರೀ ಶಿವಾಜಿ ಎಜ್ಯುಕೇಷನ್ ಸೊಸೈಟಿ, ಉಳಗಾ, ಕಾರವಾರ | ಡಾ: ಸುರೇಶ್ ಎಸ್. ಮಳೇಗಾಂವ್ | ಅರ್ಥಶಾಸ್ತ್ರ | 20–07–1969 | ಸಾಮಾನ್ಯ |
| 5. | ಕೆ.ಆರ್. ಬೆಲ್ಲದ ಕಾಲೇಜು, ಮುಂಡರಗಿ | ಕೆ.ಎಲ್.ಇ. ವಿದ್ಯಾಸಂಸ್ಥೆ, ಬೆಳಗಾಂ | ಕೆ. ರಾಮಪ್ಪ | ಇತಿಹಾಸ | 22–07–1964 | ಎಸ್.ಟಿ. |

| | | | | | | |
|---|---|---|---|---|---|---|
| 6. | ಎಸ್.ಆರ್. ಕಂಠಿ ಕಾಲೇಜು, ಮುಧೋಳ | ಬಾಸೆಲ್ ಮಿಷನ್ ಹೈಯರ್ ಎಜುಕೇಷನ್ ಸಂಸ್ಥೆ, ಧಾರವಾಡ | ಗುರುಲಿಂಗ ವಜ್ರಕಾಂತ ಕೊಕ್ಕಿಳಕಿ | ವಾಣಿಜ್ಯ ಶಾಸ್ತ್ರ | 05–07–1966 | 2ಎ |
| 7. | ಮಹಾಂತಸ್ವಾಮಿ ಕಾಲೇಜು, ಹಂಸಭಾವಿ | ಕೆ.ಎಲ್.ಇ. ವಿದ್ಯಾ ಸಂಸ್ಥೆ, ಬೆಳಗಾಂ | ಬಸಲಿಂಗಪ್ಪ ಎಲಿಗಾರ | ಭೂಗೋಳ ಶಾಸ್ತ್ರ | 01–07–1969 | 3ಬಿ |
| 8. | ಕಾವೇರಿ ಕಾಲೇಜು, ಗೋಣಿಕೊಪ್ಪ | ಶ್ರೀ ಮಂಜುನಾಥೇಶ್ವರ ಕಾಲೇಜು, ಉಜಿರೆ | ಭೋಜಮ್ಮ ಕೆ.ಎನ್. | ಕನ್ನಡ | 26–04–1970 | 3ಎ |
| 9. | ಪೂರ್ಣಪ್ರಜ್ಞಾ ಕಾಲೇಜು, ಉಡುಪಿ | ಅಕಾಡೆಮಿ ಆಫ್ ಜನರಲ್ ಎಜುಕೇಷನ್, ಮಣಿಪಾಲ್ | ಶ್ರೀಮಣಿ | ಸಮಾಜ ಶಾಸ್ತ್ರ | 22–11–1970 | 3ಬಿ |
| 10. | ಬೆಸೆಂಟ್ ಮಹಿಳಾ ಕಾಲೇಜು, ಮಂಗಳೂರು | ಶ್ರೀ ವೆಂಕಟರಮಣ ಸ್ವಾಮಿ ಕಾಲೇಜು, ಬಂಟ್ವಾಳ | ಸಕೀನಾ ನಜರ್ | ಅರ್ಥಶಾಸ್ತ್ರ | 10–10–1960 | 2ಬಿ |
| 11. | ವಿವೇಕಾನಂದ ಕಾಲೇಜು, ಪುತ್ತೂರು | ಅಕಾಡೆಮಿ ಆಫ್ ಜನರಲ್ ಎಜುಕೇಷನ್, ಮಣಿಪಾಲ್ | ಯಶವಂತ ಕೆ. | ಸಂಸ್ಕೃತ | 03–08–1968 | 2ಎ |
| 12. | ಬೆಸೆಂಟ್ ಮಹಿಳಾ ಕಾಲೇಜು, ಮಂಗಳೂರು | ಕೆನರಾ ಕಾಲೇಜು, ಮಂಗಳೂರು | ಮೀರಾದೇವಿ ಬಿ. | ಇತಿಹಾಸ | 19–03–1970 | 2ಎ |

**ಕೆ.ಎಸ್.ವೇಣುಗೋಪಾಲ್**

ಸರ್ಕಾರದ ಅಧೀನ ಕಾರ್ಯದರ್ಶಿ, ಶಿಕ್ಷಣ ಇಲಾಖೆ

**ಸರ್ಕಾರಿ ಆದೇಶ ಸಂಖ್ಯೆ: ಇಡಿ 95 ಯುಪಿಸಿ 2006, ದಿನಾಂಕ: 30ನೇ ಜೂನ್ 2006ರ ಅನುಬಂಧ–3**

ಕಾಲೇಜು ಶಿಕ್ಷಣ ಇಲಾಖೆ ವ್ಯಾಪ್ತಿಯಲ್ಲಿ ಬರುವ ಖಾಸಗಿ ಅನುದಾನಿತ ಕಾಲೇಜುಗಳಲ್ಲಿ 1993–94 ಹಾಗೂ 1994–95ನೇ ಸಾಲಿನಲ್ಲಿ ಪದವಿ ಕಾಲೇಜುಗಳಲ್ಲಿ ಅರೆಕಾಲಿಕ ಉಪನ್ಯಾಸಕರಾಗಿ ಕರ್ತವ್ಯ ನಿರ್ವಹಿಸುತ್ತಿರುವ ಅಭ್ಯರ್ಥಿಗಳು ಸಂಬಂಧಿಸಿದ ಕಾಲೇಜಿನಲ್ಲಿ ಅಗತ್ಯ ಕಾರ್ಯಭಾರ ಹಾಗೂ ಮಂಜೂರಾದ ಖಾಲಿ ಹುದ್ದೆ ಇದ್ದು, ಪದವಿ ಪೂರ್ವ ಕಾಲೇಜುಗಳಲ್ಲಿ ಸೇವಾ ಸಕ್ರಮಾತಿಗೊಳಿಸಬಹುದಾದ **ಅಭ್ಯರ್ಥಿಗಳನ್ನು ರಾಜ್ಯ ವೇತನ ಶ್ರೇಣಿ ರೂ. 6000–11200ರಲ್ಲಿ** ಸೇವಾ ವಿಲೀನತೆಗೊಳಿಸಿರುವ ಅರ್ಹ ಅಭ್ಯರ್ಥಿಗಳ ಪಟ್ಟಿ.

| ಕ್ರಮ ಸಂಖ್ಯೆ | ಅಭ್ಯರ್ಥಿಗಳ ಹೆಸರು | ವಿಷಯ | ಕಾಲೇಜಿನ ಹೆಸರು |
|---|---|---|---|
| 1. | ರೋಹಿಣಿ ಕೆ.ಎಸ್. | ಗಣಿತಶಾಸ್ತ್ರ | ಎಸ್.ಜೆ.ಎಂ. ಕಲಾ, ವಾಣಿಜ್ಯ, ವಿಜ್ಞಾನ ಕಾಲೇಜು, ಚಿತ್ರದುರ್ಗ |
| 2. | ಕರಣಂ ಅಜಿತ್ ನಾರಾಯಣರಾವ್ | ಭೌತಶಾಸ್ತ್ರ | ಶ್ರೀಮತಿ ಅಲ್ಲಂ ಸುಂಗಳಮ್ಮ ಮಹಿಳಾ ಕಾಲೇಜು, ಬಳ್ಳಾರಿ |
| 3. | ಮೌಲಾಲಿ ಹಡಗಲಿ | ಇತಿಹಾಸ | ಕೆ.ಎಲ್.ಇ. ವಿದ್ಯಾಸಂಸ್ಥೆ, ಬೆಳಗಾವಿ |
| 4. | ಬೆಲ್ಲದ ಶರಣೇಶ ಅಂದಾನಪ್ಪ | ರಾಜ್ಯಶಾಸ್ತ್ರ | ಕೆ.ಎಲ್.ಇ. ವಿದ್ಯಾಸಂಸ್ಥೆ, ಬೆಳಗಾವಿ |
| 5. | ಮಹಾಂತೇಶ ನಾಗಯ್ಯ ಆರಾಧ್ಯಮಠ | ಪ್ರಾಣಿಶಾಸ್ತ್ರ | ವೀರಶೈವ ವಿದ್ಯಾವರ್ಧಕ ಸಂಘ, ಬಳ್ಳಾರಿ |
| 6. | ಬಸವಂತರಾಯಗೂಳಿ | ಅರ್ಥಶಾಸ್ತ್ರ | ಶ್ರೀಮತಿ ಗಂಗಮ್ಮ ವೀರಪ್ಪ ಚಿನಿವಾರ ವಿದ್ಯಾ ಪ್ರಸಾರಕ ಟ್ರಸ್ಟ್, ಮುದ್ದೇಬಿಹಾಸ |

| | | | |
|---|---|---|---|
| 7. | ಜಿ.ಜಿ. ಕೋಟಿ | ಕನ್ನಡ | ಶ್ರೀ ಅನ್ನದಾನೇಶ್ವರ ವಿದ್ಯಾ ಪ್ರಸಾರಕ ಸಮಿತಿ, ನರೇಗಲ್ |
| 8. | ರಾಜೇಂದ್ರ ಎಂ. ಪತ್ತಾರ | ಜೀವಶಾಸ್ತ್ರ | ಬಾಸೆಲ್ ಮಿಷನ್ ಹೈಯರ್ ಎಜುಕೇಷನ್ ಸೊಸೈಟಿ, ಧಾರವಾಡ. |

**ಕೆ.ಎಸ್.ವೇಣುಗೋಪಾಲ್**
ಸರ್ಕಾರದ ಅಧೀನ ಕಾರ್ಯದರ್ಶಿ, ಶಿಕ್ಷಣ ಇಲಾಖೆ

**ಸರ್ಕಾರಿ ಆದೇಶ ಸಂಖ್ಯೆ: ಇಡಿ 95 ಯುಪಿಸಿ 2006 ದಿನಾಂಕ: 30ನೇ ಜೂನ್ 2006ರ ಅನುಬಂಧ–4**

ಕಾಲೇಜು ಶಿಕ್ಷಣ ಇಲಾಖೆ ವ್ಯಾಪ್ತಿಯಲ್ಲಿ ಬರುವ ಖಾಸಗಿ ಅನುದಾನಿತ ಕಾಲೇಜುಗಳಲ್ಲಿ 1993–94 ಹಾಗೂ 1994–95ನೇ ಸಾಲಿನಲ್ಲಿ ಪದವಿ ಕಾಲೇಜುಗಳಲ್ಲಿ ಅರೆಕಾಲಿಕ ಉಪನ್ಯಾಸಕರಾಗಿ ಕರ್ತವ್ಯ ನಿರ್ವಹಿಸುತ್ತಿರುವ ಅಭ್ಯರ್ಥಿಗಳು ಸಂಬಂಧಿಸಿದ ಇತರೆ ಆಡಳಿತ ಮಂಡಳಿಗಳಿಂದ ನಿರಾಕ್ಷೇಪಣಾ ಪತ್ರ ಸಲ್ಲಿಸಿರುವ ಅಭ್ಯರ್ಥಿಗಳಲ್ಲಿ ಪದವಿ ಪೂರ್ವ ಕಾಲೇಜುಗಳಲ್ಲಿ ಸೇವಾ ಸಕ್ರಮಾತಿಗೊಳಿಸಬಹುದಾದ **ಅಭ್ಯರ್ಥಿಗಳನ್ನು ರಾಜ್ಯ ವೇತನ ಶ್ರೇಣಿ ರೂ. 6000–11200ರಲ್ಲಿ** ಸೇವಾ ವಿಲೀನತೆಗೊಳಿಸಿರುವ ಅರ್ಹ ಅಭ್ಯರ್ಥಿಗಳ ಪಟ್ಟಿ.

| ಕ್ರಮ ಸಂಖ್ಯೆ | ಅಭ್ಯರ್ಥಿಗಳ ಹೆಸರು | ವಿಷಯ | ಕಾಲೇಜಿನ ಹೆಸರು |
|---|---|---|---|
| 1. | ಸುನಂದಾವಾಂಜರಖೇಡ್ | ವಾಣಿಜ್ಯಶಾಸ್ತ್ರ | ವೀರಶೈವ ವಿದ್ಯಾವರ್ಧಕ ಸಂಘ, ಬಳ್ಳಾರಿ |
| 2. | ಶ್ರೀಧರ್ ಟಿ.ಎಂ. | ಭೌತಶಾಸ್ತ್ರ | ಜನತಾ ಶಿಕ್ಷಣ ಸಮಿತಿ, ಧಾರವಾಡ |
| 3. | ಬೇಬಿ ವಿ. | ಕನ್ನಡ | ಕೆಥೋಲಿಕ್ ಶಿಕ್ಷಣ ಸಂಸ್ಥೆ, ಮಂಗಳೂರು |
| 4. | ಪ್ರೇಮಲತಾ ಕೆ. | ವಾಣಿಜ್ಯಶಾಸ್ತ್ರ | ಕೆಥೋಲಿಕ್ ಶಿಕ್ಷಣ ಸಂಸ್ಥೆ, ಮಂಗಳೂರು |

**ಕೆ.ಎಸ್.ವೇಣುಗೋಪಾಲ್**
ಪಿ.ಆರ್. 1161 ಸರ್ಕಾರದ ಅಧೀನ ಕಾರ್ಯದರ್ಶಿ, ಶಿಕ್ಷಣ ಇಲಾಖೆ

**PERSONNEL AND ADMINISTRATIVE REFORMS SECRETARIAT**
**NOTIFICATION**
**No. DPAR 237 SAS 2003, Bangalore, Dated: 12th July 2006**

The Notification No. 14013/07/2004, AIS. III, dated 12-06-2006 of Government of india, Ministry of Personnel, P.G. & Pensions, Department of Personnel and Training, New Delhi is hereby republished.

(TO BE PUBLISHED IN THE GOVERNMENT OF INDIA)
PART 1 (SECTION 2)
No. 14013/07/2004. AIS. III
Government of India,
Ministry of Personnel, Public Grievances & Pensions,
(Department of Personnel & Training)
**New Delhi: 12-06-2006**
**NOTIFICATION**

In exercise of the powers conferred by rule 3A of the India Administrative Service (Probation) Rules, 1954, the President is pleased to confirm, in the Indian Administrative Service, the following member of the Indian Administrative Service born on the State Cadre of Karnataka, with effect from the date shown against name.

| Name | Batch | Date of confirmation |
|---|---|---|
| Sri K.R. Srinivasa | 1993 | 22-12-2001 |

2. The confirmation of Sri K.R. Srinivasa is subject to final outcome in the O.A.s No. 1175/2000, 1205/2000, 1379/2000 pending in Hon'ble CAT, Bangalore Bench and O.A. No. 2631/2000 pending in Hon'ble CAT, Principal Bench.

**G.C. Pandey**
Under Secretary to the Government of India.

To.
The Manager
Government of India Press,
Faridabad, (Haryana).

By Order and in the Name of the Governor of Karnataka
**K. SUDHAKARA SHETTY**
P.R. 1196 Under Secretary to Government, DPAR (Services-1).

## ಸಂಸದೀಯ ವ್ಯವಹಾರಗಳು ಮತ್ತು ಶಾಸನ ರಚನೆ ಸಚಿವಾಲಯ

## ಅಧಿಸೂಚನೆ

**ಸಂಖ್ಯೆ: ಸಂವ್ಯಶಾಇ 59 ರಾಶಾಪ್ರ 2006, ಬೆಂಗಳೂರು, ದಿನಾಂಕ: 28ನೇ ಜುಲೈ 2006**

ಕರ್ನಾಟಕ ರೂಢಿಗತ ಅಪರಾಧಿಗಳ ಅಧಿನಿಯಮ, 1961ರ (1961ರ 24) ಮತ್ತು ಕರ್ನಾಟಕ ರೂಢಿಗತ ಅಪರಾಧಿಗಳ ನಿಯಮಗಳು, 1969 ಅಧಿಕೃತ ಕನ್ನಡ ಭಾಷಾಂತರವನ್ನು ಕರ್ನಾಟಕ ಅಫಿಷಿಯಲ್ ಲಾಂಗ್ವಾಜ್ ಆಕ್ಟ್, 1963ರ ಪ್ರಕರಣ 5A ಅಡಿಯಲ್ಲಿ ರಾಜ್ಯಪಾಲರ ಅಧಿಕಾರದ ಮೇರೆಗೆ ಸಾರ್ವಜನಿಕರ ಮಾಹಿತಿಗಾಗಿ ರಾಜ್ಯ ಪತ್ರದಲ್ಲಿ ಮರು ಪ್ರಕಟಿಸಲು ಆದೇಶಿಸಲಾಗಿದೆ.

## ಕರ್ನಾಟಕ ರೂಢಿಗತ ಅಪರಾಧಿಗಳ ಅಧಿನಿಯಮ, 1961

## ಪ್ರಕರಣಗಳ ಅನುಕ್ರಮಣಿಕೆ

**ಪ್ರಕರಣಗಳು:**

## ಅಧ್ಯಾಯ-V
### ಸಂಕೀರ್ಣ

18. ಅಧಿಕಾರ ವ್ಯಾಪ್ತಿಯ ನಿಷೇಧ

19. ಕಾನೂನು ವ್ಯವಹರಣೆಗಳ ನಿಷೇಧ

20. ಪ್ರತ್ಯಾಯೋಜಿಸುವ ಅಧಿಕಾರ

21. ನಿಯಮ ರಚನಾಧಿಕಾರ

22. ನಿರಸನ ಮತ್ತು ಉಳಿಸುವಿಕೆಗಳು

ಅನುಸೂಚಿ ಎ

ಅನುಸೂಚಿ ಬಿ

## ಉದ್ದೇಶಗಳು ಮತ್ತು ಕಾರಣಗಳ ಹೇಳಿಕೆ

**1961ರ ಅಧಿನಿಯಮ 24:–** ಈ ಮುಂದಿನವುಗಳು ರಾಜ್ಯದ ವಿವಿಧ ಪ್ರದೇಶಗಳಲ್ಲಿ ಈಗ ಜಾರಿಯಲ್ಲಿರುವ ರೂಢಿಗತ ಅಪರಾಧಿಗಳ ಬಗೆಗಿನ ವ್ಯವಹಾರ ಮತ್ತು ತರಬೇತಿಗೆ ಸಂಬಂಧಪಟ್ಟ ಕಾನೂನುಗಳಾಗಿವೆ,-

1. ಮೈಸೂರು ರೂಢಿಗತ ಅಪರಾಧಿಗಳ ನಿರ್ಬಂಧ ಅಧಿನಿಯಮ, 1952

   (1952ರ ಮೈಸೂರು ಅಧಿನಿಯಮ-XXIII);

2. ಮದರಾಸು ರೂಢಿಗತ ಅಪರಾಧಿಗಳ ನಿರ್ಬಂಧ ಅಧಿನಿಯಮ,1948

   (1948ರ ಮದರಾಸು ಅಧಿನಿಯಮ-VI);

3. ಮುಂಬಯಿ ರೂಢಿಗತ ಅಪರಾಧಿಗಳ ನಿರ್ಬಂಧ ಅಧಿನಿಯಮ,1947

   (1947 ರ ಮುಂಬಯಿ ಅಧಿನಿಯಮ -LI);

4. ಹೈದರಾಬಾದ್ ರೂಢಿಗತ ಅಪರಾಧಿಗಳ (ನಿರ್ಬಂಧ ಮತ್ತು ವ್ಯವಸ್ಥಾಪನೆ) ಅಧಿನಿಯಮ,1954
   (1954ರ ಹೈದರಾಬಾದ್ ಅಧಿನಿಯಮ XXII).

ರೂಢಿಗತ ಅಪರಾಧಿಗಳಿಗೆ ಸಂಬಂಧಪಟ್ಟಂತೆ ಇಡೀ ರಾಜ್ಯಕ್ಕೆ ಅನ್ವಯವಾಗುವ ಏಕರೂಪದ ಒಂದು ಕಾನೂನನ್ನು ತರುವುದು ಅವಶ್ಯವಾಗಿದೆ. ಆದ್ದರಿಂದ ಈ ಅಧಿನಿಯಮ.

ಈ ಅಧಿನಿಯಮದ ಮುಖ್ಯ ಉಪಬಂಧಗಳು, ರೂಢಿಗತ ಅಪರಾಧಿಗಳ ನೋಂದಣಿ ಮತ್ತು ಅವರ ಚಲನವಲನಗಳ ಮೇಲೆ ನಿರ್ಬಂಧ, ಸುಧಾರಕ ವ್ಯವಸ್ಥಾಪನಾ ಕೇಂದ್ರಗಳ ಸ್ಥಾಪನೆ ಮತ್ತು ಇತರ ಪೂರಕ ವಿಷಯಗಳಿಗೆ ಸಂಬಂಧಪಟ್ಟಿವೆ.

(ಕಡತ ಎಲ್ ಎ ಡಬ್ಲ್ಯೂ 16 ಎಲ್ ಜಿ ಎನ್ 59 -ಇದರಿಂದ ಪಡೆಯಲಾಗಿದೆ.)

# 1961ರ [1][ಕರ್ನಾಟಕ ಅಧಿನಿಯಮ][1] ಸಂಖ್ಯೆ 24

(1961ರ ನವೆಂಬರ್ ಮೂವತ್ತನೇ ದಿವಸದಂದು [1][ಕರ್ನಾಟಕ ರಾಜಪತ್ರ][1] ದಲ್ಲಿ ಮೊದಲು ಪ್ರಕಟವಾಗಿದೆ.)

# [1][ಕರ್ನಾಟಕ][1] ರೂಢಿಗತ ಅಪರಾಧಿಗಳ ಅಧಿನಿಯಮ, 1961

(1961ರ ನವೆಂಬರ್ ಇಪ್ಪತ್ತೊಂದನೇ ದಿನಾಂಕದಂದು ರಾಷ್ಟ್ರಾಧ್ಯಕ್ಷರ ಅನುಮತಿಯನ್ನು ಪಡೆಯಲಾಗಿದೆ.)

**ರೂಢಿಗತ ಅಪರಾಧಿಗಳ ಬಗೆಗಿನ ವ್ಯವಹಾರ ಮತ್ತು ತರಬೇತಿಗಾಗಿ ಉಪಬಂಧ ಕಲ್ಪಿಸುವ ಅಧಿನಿಯಮ.**

[1][ಕರ್ನಾಟಕ ರಾಜ್ಯ][1] ದಲ್ಲಿ ರೂಢಿಗತ ಅಪರಾಧಿಗಳ ಬಗೆಗಿನ ವ್ಯವಹಾರ ಮತ್ತು ತರಬೇತಿಗಾಗಿ ಉಪಬಂಧ ಕಲ್ಪಿಸುವುದು ಯುಕ್ತವಾಗಿರುವುದರಿಂದ;

ಇದು, ಭಾರತ ಗಣರಾಜ್ಯದ ಹನ್ನೆರಡನೇ ವರ್ಷದಲ್ಲಿ [1][ಕರ್ನಾಟಕ ರಾಜ್ಯ][1] ವಿಧಾನ ಮಂಡಲದಿಂದ ಈ ಮುಂದಿನಂತೆ ಅಧಿನಿಯಮಿತವಾಗತಕ್ಕದ್ದು:-

1. ಕರ್ನಾಟಕ ಕಾನೂನುಗಳ ಅಳವಡಿಕೆ ಆದೇಶ, 1973ರ ಮೂಲಕ 1.11.1973ರಿಂದ ಜಾರಿಗೆ ಬರುವಂತೆ ಅಳವಡಿಸಲಾಗಿದೆ.

## ಅಧ್ಯಾಯ-I

### ಪ್ರಾರಂಭಿಕ

**1. ಚಿಕ್ಕ ಹೆಸರು, ವ್ಯಾಪ್ತಿ ಮತ್ತು ಪ್ರಾರಂಭ.-** (1) ಈ ಅಧಿನಿಯಮವನ್ನು ಕರ್ನಾಟಕ ರೂಢಿಗತ ಅಪರಾಧಿಗಳ ಅಧಿನಿಯಮ, 1961 ಎಂದು ಕರೆಯತಕ್ಕದ್ದು.

(2) ಇದು ಇಡೀ [1][ಕರ್ನಾಟಕ ರಾಜ್ಯ][1]ಕ್ಕೆ ವ್ಯಾಪ್ತವಾಗುತ್ತದೆ.

(3) ಇದು, ಸರ್ಕಾರವು ಅಧಿಸೂಚನೆಯ ಮೂಲಕ ಸರ್ಕಾರಿ ರಾಜ್ಯಪತ್ರದಲ್ಲಿ ಗೊತ್ತುಪಡಿಸಬಹುದಾದಂಥ [1][ದಿನಾಂಕ][1] ದಂದು ಜಾರಿಗೆ ಬರತಕ್ಕದ್ದು.

1. ಅಧಿನಿಯಮವು ಅಧಿಸೂಚನೆಯ ಮೂಲಕ 17.7.1969ರಂದು ಜಾರಿಗೆ ಬಂದಿದೆ. ಅಧಿಸೂಚನೆಯ ಪಾಠವು 12ನೇ ಪುಟದಲ್ಲಿದೆ.

**2. ಪರಿಭಾಷೆಗಳು.-** ಈ ಅಧಿನಿಯಮದಲ್ಲಿ ಸಂದರ್ಭವು ಅನ್ಯಥಾ ಅಗತ್ಯಪಡಿಸಿದ ಹೊರತು,-

(ಎ) "ಸಂಹಿತೆ" ಎಂದರೆ, ದಂಡ ಪ್ರಕ್ರಿಯಾ ಸಂಹಿತೆ, 1898;

(ಬಿ) "ಸುಧಾರಕ ವ್ಯವಸ್ಥಾಪನಾ ಕೇಂದ್ರ" ಎಂದರೆ 13ನೇ ಪ್ರಕರಣದ ಅಡಿಯಲ್ಲಿ ಒಂದು ಸುಧಾರಕ ವ್ಯವಸ್ಥಾಪನಾ ಕೇಂದ್ರ ಎಂದು ಸ್ಥಾಪಿತವಾದ, ಅನುಮೋದಿತವಾದ ಅಥವಾ ಪ್ರಮಾಣೀಕರಿಸಲಾದ ಯಾವುದೇ ಸ್ಥಳ;

(ಸಿ) "ಜಿಲ್ಲೆ" ಎಂದರೆ ಆ ಸಂಹಿತೆಯ ಉದ್ದೇಶಕ್ಕಾಗಿ ಒಂದು ಜಿಲ್ಲೆಯಾಗಿ ರಚಿಸಲಾದ ಪ್ರಾದೇಶಿಕ ವಿಭಾಗ ಮತ್ತು ಇದು ಬೆಂಗಳೂರು ನಗರವನ್ನು ಒಳಗೊಳ್ಳುತ್ತದೆ;

(ಡಿ) "ಜಿಲ್ಲಾ ಮ್ಯಾಜಿಸ್ಟ್ರೇಟ್" ಎಂದರೆ ಜಿಲ್ಲೆಯ ಜಿಲ್ಲಾಧಿಕಾರಿ;

(ಇ) "ರೂಢಿಗತ ಅಪರಾಧಿ" ಎಂದರೆ ಈ ಅಧಿನಿಯಮದ ಪ್ರಾರಂಭಕ್ಕೆ ಮುಂಚೆಯಾಗಲಿ ಅಥವಾ ತರುವಾಯವಾಗಲಿ ಅಥವಾ ಜಾರಿಯ ದಿನಾಂಕದ ಭಾಗಶ: ಮೊದಲಾಗಲಿ ಅಥವಾ ತರುವಾಯವಾಗಲಿ, ತಾನು ಹದಿನೆಂಟು ವರ್ಷ ವಯೋಮಿತಿಯನ್ನು ತಲುಪಿದಂದಿನಿಂದ ಐದು ವರ್ಷಗಳ ಯಾವುದೇ ನಿರಂತರ ಅವಧಿಯಲ್ಲಿ ಮೂರು ಸಂದರ್ಭಗಳಿಗಿಂತ ಕಡಿಮೆಯಿಲ್ಲದಂತೆ, ಒಂದೇ ವ್ಯವಹಾರದ ಭಾಗವಾಗಿರದ ಬೇರೆಬೇರೆ ಸಂದರ್ಭಗಳಲ್ಲಿ, ಯಾವುದೇ ಒಂದು ಅಥವಾ ಹೆಚ್ಚಿನ ಅನುಸೂಚಿತ ಅಪರಾಧಗಳಿಗಾಗಿ ಅಪರಾಧ ನಿರ್ಣಯವಾದ ನಂತರ ಗಣನೀಯ ಅವಧಿಯ ಕಾರವಾಸ ಶಿಕ್ಷೆಗೊಳಗಾಗಿರುವ, ಅಂಥ ಶಿಕ್ಷೆಯು ಅಪೀಲಿನಲ್ಲಿ ಅಥವಾ ಪುನರೀಕ್ಷಣೆಯ ಮೇಲೆ ವಿಪರ್ಯಯವಾಗದಿರುವ ಒಬ್ಬ ವ್ಯಕ್ತಿ:

ಪರಂತು, ಮೇಲೆ ಉಲ್ಲೇಖಿಸಿದ ಐದು ವರ್ಷಗಳ ನಿರಂತರ ಅವಧಿಯನ್ನು ಲೆಕ್ಕ ಹಾಕುವಾಗ, ಕಾರಾವಾಸದ ಶಿಕ್ಷೆಯ ಮೇರೆಗಾಗಲಿ ಅಥವಾ ಬಂಧನದ ಮೇರೆಗಾಗಲಿ ಜೈಲಿನಲ್ಲಿ ಕಳೆದ ಯಾವುದೇ ಅವಧಿಯನ್ನು ಲೆಕ್ಕಕ್ಕೆ ತೆಗೆದುಕೊಳ್ಳತಕ್ಕದ್ದಲ್ಲ.

(ಎಫ್) "ಅಧಿಸೂಚನೆ" ಎಂದರೆ ಸರ್ಕಾರಿ ರಾಜ್ಯಪತ್ರದಲ್ಲಿ ಪ್ರಕಟಿಸಲಾದ ಒಂದು ಅಧಿಸೂಚನೆ;

(ಜಿ) " ನಿಯಮಿಸಲಾದುದು" ಎಂದರೆ ಈ ಅಧಿನಿಯಮದ ಅಡಿಯಲ್ಲಿ ರಚಿಸಿದ ನಿಯಮಗಳ ಮೂಲಕ ನಿಯಮಿಸಲಾದುದು;

(ಎಚ್) "ನೋಂದಾಯಿತ ಅಪರಾಧಿ" ಎಂದರೆ 3ನೇ ಪ್ರಕರಣದ ಅಡಿಯಲ್ಲಿ ಹೊರಡಿಸಲಾದ ಒಂದು ನಿರ್ದೇಶನದ ಅಡಿಯಲ್ಲಿ ರಿಜಿಸ್ಟರಿನಲ್ಲಿ ಹೆಸರು ಮತ್ತು ಇತರ ವಿವರಗಳು ನಮೂದಿತವಾಗಿರುವ ಅಥವಾ 9ನೇ ಪ್ರಕರಣದ ಅಡಿಯಲ್ಲಿ ಮರು ನೋಂದಾಯಿತವಾಗಿರುವ ಒಬ್ಬ ರೂಢಿಗತ ಅಪರಾಧಿ;

(ಐ) "ಅನುಸೂಚಿತ ಅಪರಾಧ" ಎಂದರೆ 'ಎ' ಅನುಸೂಚಿಯಲ್ಲಿ ನಿರ್ದಿಷ್ಟಪಡಿಸಲಾದ ಒಂದು ಅಪರಾಧ ಅಥವಾ ಅದನ್ನು ಹೋಲುವ ಒಂದು ಅಪರಾಧ;

(ಜೆ) "ಪೊಲೀಸ್ ಅಧೀಕ್ಷಕ" ಎಂದರೆ ಆ ಪ್ರದೇಶದ ಮೇಲೆ ಅಧಿಕಾರ ವ್ಯಾಪ್ತಿಯನ್ನು ಹೊಂದಿರುವ ಪೊಲೀಸ್ ಅಧೀಕ್ಷಕ.

## ಅಧ್ಯಾಯ-II

### ರೂಢಿಗತ ಅಪರಾಧಿಗಳ ನೋಂದಣಿ ಮತ್ತು ಅವರ ಚಲನವಲನಗಳ ಮೇಲೆ ನಿರ್ಬಂಧಗಳು

**3. ರೂಢಿಗತ ಅಪರಾಧಿಗಳನ್ನು ನೋಂದಾಯಿಸಬೇಕೆಂದು ನಿರ್ದೇಶಿಸಲು ರಾಜ್ಯ ಸರ್ಕಾರದ ಅಧಿಕಾರ.–** ರಾಜ್ಯ ಸರ್ಕಾರವು, ಅಧಿಸೂಚನೆಯ ಮೂಲಕ, ಜಿಲ್ಲೆಯೊಳಗಿನ ರೂಢಿಗತ ಅಪರಾಧಿಗಳ ಹೆಸರುಗಳು, ಹಿಂದಿನ ಅಪರಾಧ ನಿರ್ಣಯಗಳು ಮತ್ತು ನಿಯಮಿಸಲಾದ ಇತರ ವಿವರಗಳನ್ನು ನಮೂದಿಸಿ ಅಂಥ ಅಪರಾಧಿಗಳ ರಿಜಿಸ್ಟರನ್ನು ಇಡಲು ಅಥವಾ ಇಡುವಂತೆ ಮಾಡಲು ಜಿಲ್ಲಾ ಮ್ಯಾಜಿಸ್ಟ್ರೇಟನಿಗೆ ನಿರ್ದೇಶಿಸಬಹುದು.

**4. ರೂಢಿಗತ ಅಪರಾಧಿಗಳಿಗೆ ನೋಟೀಸನ್ನು ನೀಡುವುದು ಮತ್ತು ರಿಜಿಸ್ಟರಿನಲ್ಲಿ ಮಾಡಬೇಕಾದ ನಮೂದುಗಳ ಬಗ್ಗೆ ವಿಚಾರಣೆ.–** 3ನೇ ಪ್ರಕರಣದ ಅಡಿಯಲ್ಲಿ ಅಧಿಸೂಚನೆಯನ್ನು ಪ್ರಕಟಿಸಲಾದ ತರುವಾಯ, ಆ ಜಿಲ್ಲಾ ಮ್ಯಾಜಿಸ್ಟ್ರೇಟನು ಅಥವಾ ಈ ಬಗ್ಗೆ ಅವನು ನೇಮಕ ಮಾಡಿದ ಯಾರೇ ಅಧಿಕಾರಿಯು, ನಿಯಮಿಸಲಾದ ರೀತಿಯಲ್ಲಿ ಜಾರಿಗೊಳಿಸಬೇಕಾದ ನಿಯಮಿಸಲಾದ ನಮೂನೆಯಲ್ಲಿನ ನೋಟೀಸಿನ ಮೂಲಕ ಜಿಲ್ಲೆಯಲ್ಲಿನ ಪ್ರತಿಯೊಬ್ಬ ರೂಢಿಗತ ಅಪರಾಧಿಯನ್ನು,-

(ಎ) ಅದರಲ್ಲಿ ನಿರ್ದಿಷ್ಟಪಡಿಸಲಾದ ಕಾಲ ಮತ್ತು ಸ್ಥಳದಲ್ಲಿ ತನ್ನ ಮುಂದೆ ಹಾಜರಾಗುವಂತೆ;

(ಬಿ) ರಿಜಿಸ್ಟರಿನಲ್ಲಿ ರೂಢಿಗತ ಅಪರಾಧಿಯ ಹೆಸರು ಮತ್ತು ನಿಯಮಿಸಲಾದ ಇತರ ವಿವರಗಳನ್ನು ನಮೂದಿಸಲು ತನಗೆ ಸಾಧ್ಯವಾಗುವಂತೆ ಮಾಡಲು ಅವಶ್ಯಕವಾಗಬಹುದಾದಂಥ ಮಾಹಿತಿಯನ್ನು ಒದಗಿಸುವಂತೆ ;

(ಸಿ) ಅವನ ಬೆರಳು ಮತ್ತು ಅಂಗೈ ಮುದ್ರೆಗಳು, ಪಾದದ ಗುರುತುಗಳು ಮತ್ತು ಛಾಯಾ ಚಿತ್ರಗಳನ್ನು ತೆಗೆಯಲು ಅನುಮತಿಸುವಂತೆ

- ಕೇಳತಕ್ಕದ್ದು:

ಪರಂತು, ಒಬ್ಬ ರೂಢಿಗತ ಅಪರಾಧಿಯ ಹೆಸರು, ಹಿಂದಿನ ಅಪರಾಧ ನಿರ್ಣಯಗಳು ಮತ್ತು ನಿಯಮಿಸಲಾದ ಇತರ ವಿವರಗಳಿಗೆ ಸಂಬಂಧಿಸಿದಂತೆ, ರಿಜಿಸ್ಟರಿನಲ್ಲಿ ಅಂಥ ನಮೂದು ಏಕೆ ಮಾಡಕೂಡದು ಎಂಬುದಕ್ಕೆ ಕಾರಣವನ್ನು ತೋರಿಸಲು ಒಂದು ಸೂಕ್ತ ಅವಕಾಶವನ್ನು ಕೊಟ್ಟ ತರುವಾಯವಲ್ಲದೆ ಅವುಗಳನ್ನು ನಮೂದಿಸತಕ್ಕದ್ದಲ್ಲ :

ಮತ್ತೂ ಪರಂತು, ಜಿಲ್ಲಾ ಮ್ಯಾಜಿಸ್ಟ್ರೇಟನು ಅಥವಾ ಈ ಬಗ್ಗೆ ಅವನು ನೇಮಕ ಮಾಡಿದ ಅಧಿಕಾರಿಯು, ಸಂಹಿತೆಯ 511ನೇ ಪ್ರಕರಣದ ಮೂಲಕ ಉಪಬಂಧಿಸಿದ ರೀತಿಯಲ್ಲಿ ಅಂಥ ಹಿಂದಿನ ಅಪರಾಧ ನಿರ್ಣಯದ ಸತ್ಯತೆಯ ಬಗ್ಗೆ ಮನದಟ್ಟು ಮಾಡಿಕೊಂಡಿರುವ ಹೊರತು, ಒಬ್ಬ ರೂಢಿಗತ ಅಪರಾಧಿಯ ಹಿಂದಿನ ಅಪರಾಧ ನಿರ್ಣಯಕ್ಕೆ ಸಂಬಂಧಪಟ್ಟ ಯಾವುದೇ ನಮೂದನ್ನು ಮಾಡತಕ್ಕದ್ದಲ್ಲ.

**5. ರಿಜಿಸ್ಟರಿನ ಪ್ರಭಾರ ಮತ್ತು ಅದರಲ್ಲಿನ ಬದಲಾವಣೆಗಳು.–** (1) ಜಿಲ್ಲೆಯಲ್ಲಿನ ರೂಢಿಗತ ಅಪರಾಧಿಗಳ ಹೆಸರುಗಳು, ಹಿಂದಿನ ಅಪರಾಧ ನಿರ್ಣಯಗಳು ಮತ್ತು ನಿಯಮಿಸಲಾದ ಇತರ ವಿವರಗಳನ್ನು ರಿಜಿಸ್ಟರಿನಲ್ಲಿ ನಮೂದಿಸಿದ ತರುವಾಯ, ಅಂಥ ರಿಜಿಸ್ಟರನ್ನು ಪೊಲೀಸ್ ಅಧೀಕ್ಷಕನ ಅಭಿರಕ್ಷೆಯಲ್ಲಿ ಇಡತಕ್ಕದ್ದು; ಆತನು ಕಾಲಕಾಲಕ್ಕೆ ತನ್ನ ಅಭಿಪ್ರಾಯದಲ್ಲಿ, ಅದರಲ್ಲಿ ಮಾಡಬೇಕಾಗಿರುವಂಥ ಯಾವುವೇ ಬದಲಾವಣೆಗಳನ್ನು ಜಿಲ್ಲಾ ಮ್ಯಾಜಿಸ್ಟ್ರೇಟನಿಗೆ ವರದಿ ಮಾಡತಕ್ಕದ್ದು.

(2) ರಿಜಿಸ್ಟರು ಪೊಲೀಸ್ ಅಧೀಕ್ಷಕನ ಅಭಿರಕ್ಷೆಯಲ್ಲಿರುವಾಗ, ಜಿಲ್ಲಾ ಮ್ಯಾಜಿಸ್ಟ್ರೇಟನ ಒಂದು ಲಿಖಿತ ಆದೇಶದ ಮೂಲಕ ಅಥವಾ ಅದರ ಮೇರೆಗೆ ಹೊರತು, ಆ ರಿಜಿಸ್ಟರಿನಲ್ಲಿ ಯಾವುವೇ ಹೊಸ ನಮೂದುಗಳನ್ನು ಮಾಡತಕ್ಕದ್ದಲ್ಲ ಅಥವಾ ಯಾವುದೇ ನಮೂದನ್ನು ರದ್ದುಗೊಳಿಸತಕ್ಕದ್ದಲ್ಲ.

**6. ಯಾವುದೇ ಕಾಲದಲ್ಲಿ ಬೆರಳು ಮುದ್ರೆಗಳು, ಇತ್ಯಾದಿಗಳನ್ನು ತೆಗೆದುಕೊಳ್ಳಲು ಅಧಿಕಾರ.–** ಜಿಲ್ಲಾ ಮ್ಯಾಜಿಸ್ಟ್ರೇಟನು ಅಥವಾ ಈ ಬಗ್ಗೆ ಅವನು ನೇಮಕ ಮಾಡಿದ ಯಾರೇ ಅಧಿಕಾರಿಯು, ಯಾವುದೇ ಕಾಲದಲ್ಲಿ, ಯಾರೇ ನೋಂದಾಯಿತ ಅಪರಾಧಿಯ ಬೆರಳ ಮತ್ತು ಅಂಗೈ ಮುದ್ರೆಗಳನ್ನು, ಪಾದದ ಮುದ್ರೆಗಳನ್ನು ಮತ್ತು ಛಾಯಾ ಚಿತ್ರಗಳನ್ನು ತೆಗೆದುಕೊಳ್ಳಬೇಕೆಂದು ಆದೇಶಿಸಬಹುದು.

**7. ನೋಂದಾಯಿತ ಅಪರಾಧಿಗಳು ವಾಸಸ್ಥಳದ ಪ್ರತಿಯೊಂದು ಬದಲಾವಣೆಯನ್ನು ತಿಳಿಸುವುದು ಮತ್ತು ಸ್ವತಃ ಹಾಜರಾಗುವುದು.-** (1) ಪ್ರತಿಯೊಬ್ಬ ನೋಂದಾಯಿತ ಅಪರಾಧಿಯು, ತನ್ನ ಸಾಮಾನ್ಯ ವಾಸಸ್ಥಳದ ಯಾವುದೇ ಬದಲಾವಣೆ ಅಥವಾ ಉದ್ದೇಶಿತ ಬದಲಾವಣೆಯನ್ನು ನಿಯಮಿಸಬಹುದಾದಂಥ ಪ್ರಾಧಿಕಾರಿಗೆ ಮತ್ತು ಅಂಥ ರೀತಿಯಲ್ಲಿ ತಿಳಿಸತಕ್ಕದ್ದು :

ಪರಂತು, ಅಂಥ ಅಪರಾಧಿಯು ತನ್ನ ಸಾಮಾನ್ಯ ವಾಸಸ್ಥಳವನ್ನು [1][ಕರ್ನಾಟಕ ರಾಜ್ಯ][1]ದ ಒಳಗಡೆಯಾಗಲಿ ಅಥವಾ ಹೊರಗಡೆಯಾಗಲಿ ಇನ್ನೊಂದು ಜಿಲ್ಲೆಗೆ ಬದಲಾಯಿಸಿದಲ್ಲಿ ಅಥವಾ ಬದಲಾಯಿಸಲು ಉದ್ದೇಶಿಸುವಲ್ಲಿ, ಅವನು ಯಾವ ಜಿಲ್ಲೆಯಲ್ಲಿ ನೋಂದಾಯಿತನಾಗಿರುವನೋ ಆ ಜಿಲ್ಲೆಯ ಜಿಲ್ಲಾ ಮ್ಯಾಜಿಸ್ಟ್ರೇಟನಿಗೆ ಬದಲಾವಣೆಯ ಅಥವಾ ಉದ್ದೇಶಿತ ಬದಲಾವಣೆಯ ಬಗ್ಗೆ ತಿಳಿಸತಕ್ಕದ್ದು.

1. ಕರ್ನಾಟಕ ಕಾನೂನುಗಳ ಅಳವಡಿಕೆ ಆದೇಶ, 1973ರ ಮೂಲಕ 1.11.1973ರಿಂದ ಜಾರಿಗೆ ಬರುವಂತೆ ಅಳವಡಿಸಲಾಗಿದೆ.

(2) ಜಿಲ್ಲಾ ಮ್ಯಾಜಿಸ್ಟ್ರೇಟನು, ಲಿಖಿತ ಆದೇಶದ ಮೂಲಕ ಯಾರೇ ನೋಂದಾಯಿತ ಅಪರಾಧಿಯು,-

(ಎ) ಪ್ರತಿ ತಿಂಗಳಲ್ಲಿ ಒಂದು ಬಾರಿ ಅಥವಾ ಜಿಲ್ಲಾ ಮ್ಯಾಜಿಸ್ಟ್ರೇಟನು ಆದೇಶದಲ್ಲಿ ನಿರ್ದಿಷ್ಟಪಡಿಸಿದ ಕಾರಣಗಳಿಗಾಗಿ ಆದೇಶದಲ್ಲಿ ನಿರ್ದಿಷ್ಟಪಡಿಸಬಹುದಾದಂಥ ಪ್ರಾಧಿಕಾರಿಯ ಬಳಿ ಮತ್ತು ಅಂಥ ರೀತಿಯಲ್ಲಿ ಮೇಲಿಂದ ಮೇಲೆ ಹಾಜರಾಗತಕ್ಕದ್ದೆಂದು; ಮತ್ತು

(ಬಿ) ತನ್ನ ಸಾಮಾನ್ಯ ವಾಸಸ್ಥಳದಿಂದ ಯಾವುದೇ ಗೈರು ಹಾಜರಿಯ ಅಥವಾ ಉದ್ದೇಶಿತ ಗೈರು ಹಾಜರಿಯ ಬಗ್ಗೆ ಮೇಲ್ಕಂಡ ಪ್ರಾಧಿಕಾರಿಗೆ ತಿಳಿಸತಕ್ಕದೆಂದು

- ನಿರ್ದೇಶಿಸಬಹುದು:

ಪರಂತು, ಜಿಲ್ಲಾ ಮ್ಯಾಜಿಸ್ಟ್ರೇಟನು, ತನಗೆ ಸೂಕ್ತವೆಂದು ಕಂಡು ಬರಬಹುದಾದಂಥ ಅವಧಿಗೆ ಮತ್ತು ಅಂಥ ಷರತ್ತುಗಳ ಮೇಲೆ ಅಂಥ ಯಾರೇ ಅಪರಾಧಿಗೆ ಅವನ ಸಾಮಾನ್ಯ ವಾಸಸ್ಥಳದಿಂದ ಯಾವುದೇ ಗೈರು ಹಾಜರಿಯ ಅಥವಾ ಉದ್ದೇಶಿತ ಗೈರು ಹಾಜರಿಯ ಬಗ್ಗೆ ತಿಳಿಸಬೇಕೆಂಬುದರಿಂದ ವಿನಾಯತಿ ನೀಡಬಹುದು.

**8. ಒಬ್ಬ ನೋಂದಾಯಿತ ಅಪರಾಧಿಯು ತನ್ನ ಸಾಮಾನ್ಯ ವಾಸಸ್ಥಳವನ್ನು ಬದಲಾಯಿಸಿದಾಗ ಕೈಗೊಳ್ಳಬೇಕಾದ ಕ್ರಮ.-** (1) ಯಾರೇ ನೋಂದಾಯಿತ ಅಪರಾಧಿಯು, ತನ್ನ ಸಾಮಾನ್ಯ ವಾಸಸ್ಥಳವನ್ನು [1][ಕರ್ನಾಟಕ ರಾಜ್ಯ][1] ದೊಳಗಿನ ಇನ್ನೊಂದು ಜಿಲ್ಲೆಗೆ ಬದಲಾಯಿಸುವಲ್ಲಿ, ಅಪರಾಧಿಯು ನೋಂದಾಯಿತನಾಗಿರುವ ಜಿಲ್ಲೆಯ ಜಿಲ್ಲಾ ಮ್ಯಾಜಿಸ್ಟ್ರೇಟನು ಇನ್ನೊಂದು ಜಿಲ್ಲೆಯ ಜಿಲ್ಲಾ ಮ್ಯಾಜಿಸ್ಟ್ರೇಟನಿಗೆ ಅಂಥ ಬದಲಾವಣೆಯ ಬಗ್ಗೆ ತಿಳಿಸತಕ್ಕದ್ದು ಮತ್ತು ಅದೇ ಕಾಲದಲ್ಲಿ ನೋಂದಾಯಿತ ಅಪರಾಧಿಯ ಹೆಸರು ಮತ್ತು ಇತರ ವಿವರಗಳನ್ನು ಒದಗಿಸತಕ್ಕದ್ದು.

1. ಕರ್ನಾಟಕ ಕಾನೂನುಗಳ ಅಳವಡಿಕೆ ಆದೇಶ, 1973ರ ಮೂಲಕ 1.11.1973ರಿಂದ ಜಾರಿಗೆ ಬರುವಂತೆ ಅಳವಡಿಸಲಾಗಿದೆ.

(2) ಅಂಥ ಮಾಹಿತಿಯನ್ನು ಸ್ವೀಕರಿಸಿದ ಮೇಲೆ, ಆ ಇನ್ನೊಂದು ಜಿಲ್ಲೆಯ ಜಿಲ್ಲಾ ಮ್ಯಾಜಿಸ್ಟ್ರೇಟನು, ತನ್ನ ರಿಜಿಸ್ಟರಿನಲ್ಲಿ ನೋಂದಾಯಿತ ಅಪರಾಧಿಯ ಹೆಸರು ಮತ್ತು ಇತರ ವಿವರಗಳನ್ನು ನಮೂದಿಸತಕ್ಕದ್ದು ಮತ್ತು ಮೊದಲ ಜಿಲ್ಲೆಯ ಜಿಲ್ಲಾ ಮ್ಯಾಜಿಸ್ಟ್ರೇಟನಿಗೆ ಅಂಥ ನೋಂದಣಿಯ ಬಗ್ಗೆ ತಿಳಿಸತಕ್ಕದ್ದು ಮತ್ತು ಆ ನಂತರ, ಅಂಥ ಜಿಲ್ಲಾ ಮ್ಯಾಜಿಸ್ಟ್ರೇಟನು, ಆ ಅಪರಾಧಿಗೆ ಸಂಬಂಧಪಟ್ಟ ನಮೂದನ್ನು ತನ್ನ ರಿಜಿಸ್ಟರಿನಿಂದ ತೆಗೆದು ಹಾಕತಕ್ಕದ್ದು.

(3) ಒಬ್ಬ ನೋಂದಾಯಿತ ಅಪರಾಧಿಯು, ತನ್ನ ಸಾಮಾನ್ಯ ವಾಸಸ್ಥಳವನ್ನು [1][ಕರ್ನಾಟಕ ರಾಜ್ಯದ][1] ಹೊರಗಡೆ ಇರುವ ಇನ್ನೊಂದು ಜಿಲ್ಲೆಗೆ ಬದಲಾಯಿಸಿದಲ್ಲಿ ಮೊದಲ ಜಿಲ್ಲೆಯ ಜಿಲ್ಲಾ ಮ್ಯಾಜಿಸ್ಟ್ರೇಟನು ಆ ಇನ್ನೊಂದು ಜಿಲ್ಲೆಯ ಜಿಲ್ಲಾ ಮ್ಯಾಜಿಸ್ಟ್ರೇಟನಿಗೆ ನೋಂದಾಯಿತ ಅಪರಾಧಿಯ ಹೆಸರು ಮತ್ತು ಇತರ ವಿವರಗಳನ್ನು ಒದಗಿಸುವಾಗ ಆ ಜಿಲ್ಲಾ ಮ್ಯಾಜಿಸ್ಟ್ರೇಟನನ್ನು ಆ ಇನ್ನೊಂದು ಜಿಲ್ಲೆಯಲ್ಲಿ ತತ್ಕಾಲದಲ್ಲಿ ಜಾರಿಯಲ್ಲಿರುವ ಯಾವುದೇ ಕಾನೂನಿನ ಅಡಿಯಲ್ಲಿ ಅಪರಾಧಿಗೆ ಸಂಬಂಧಪಟ್ಟಂತೆ ಕೈಗೊಳ್ಳಬಹುದಾದ ಕ್ರಮಗಳು ಯಾವುವಾದರೂ ಇದ್ದರೆ, ಅವುಗಳ ಬಗ್ಗೆ ಮಾಹಿತಿಯನ್ನು ನೀಡುವಂತೆ ಒಂದು ಕೋರಿಕೆಯನ್ನು ಮಾಡಬಹುದು; ಮತ್ತು ಅಂಥ ಮಾಹಿತಿಯನ್ನು ಸ್ವೀಕರಿಸಿದ ತರುವಾಯ, ಮೊದಲ ಜಿಲ್ಲೆಯ ಜಿಲ್ಲಾ ಮ್ಯಾಜಿಸ್ಟ್ರೇಟನು, ಆ ಅಪರಾಧಿಗೆ ಸಂಬಂಧಪಟ್ಟ ನಮೂದನ್ನು ತನ್ನ ರಿಜಿಸ್ಟರಿನಿಂದ ತೆಗೆದುಹಾಕಬಹುದು.

1. ಕರ್ನಾಟಕ ಕಾನೂನುಗಳ ಅಳವಡಿಕೆ ಆದೇಶ, 1973ರ ಮೂಲಕ 1.11.1973ರಿಂದ ಜಾರಿಗೆ ಬರುವಂತೆ ಅಳವಡಿಸಲಾಗಿದೆ.

(4) (2)ನೇ ಉಪ ಪ್ರಕರಣದ ಅಡಿಯಲ್ಲಿ ನೋಂದಾಯಿತ ಅಪರಾಧಿಯ ಹೆಸರು ಮತ್ತು ಇತರ ವಿವರಗಳನ್ನು ರಿಜಿಸ್ಟರಿನಲ್ಲಿ ನಮೂದಿಸಿದ ಮೇಲೆ, ಈ ಅಧಿನಿಯಮದ ಉಪಬಂಧಗಳು ಮತ್ತು ಅದರ ಅಡಿಯಲ್ಲಿ ರಚಿಸಿದ ನಿಯಮಗಳು, 3ನೇ ಪ್ರಕರಣದ ಅಡಿಯಲ್ಲಿ ನೀಡಲಾದ ನಿರ್ದೇಶನಕ್ಕನುಸಾರವಾಗಿ ಯಾವ ಜಿಲ್ಲೆಗೆ ಅವನ ಸಾಮಾನ್ಯ ವಾಸಸ್ಥಳವನ್ನು ಬದಲಾಯಿಸಿರುವನೋ ಆ ಜಿಲ್ಲೆಯ ರಿಜಿಸ್ಟರಿನಲ್ಲಿ ಅವನನ್ನು ನೋಂದಾಯಿಸಿಕೊಂಡಿದ್ದರೆ ಹೇಗೋ ಹಾಗೆ ಅವನಿಗೆ ಅನ್ವಯವಾಗತಕ್ಕದ್ದು.

**9. ರೂಢಿಗತ ಅಪರಾಧಿಗಳ ನೋಂದಣಿಯ ಅವಧಿ, ಅದರ ರದ್ದಿಯಾತಿ ಮತ್ತು ಮರು ನೋಂದಣಿ.-** (1) ಈ ಅಧಿನಿಯಮದ ಅಡಿಯಲ್ಲಿ ಒಬ್ಬ ರೂಢಿಗತ ಅಪರಾಧಿಯ ನೋಂದಣಿಯು, ಜಿಲ್ಲಾ ಮ್ಯಾಜಿಸ್ಟ್ರೇಟನು ಲಿಖಿತದಲ್ಲಿ ಕಾರಣಗಳನ್ನು ದಾಖಲು ಮಾಡಿ, ಮೊದಲೇ ರದ್ದು ಪಡಿಸಿದ್ದ ಹೊರತು, ಅಂಥ ನೋಂದಣಿಯ ದಿನಾಂಕದಿಂದ ಐದು ವರ್ಷಗಳು ಮುಕ್ತಾಯವಾದ ಮೇಲೆ ಜಾರಿಯಲ್ಲಿರುವುದು ನಿಂತು ಹೋಗತಕ್ಕದ್ದು. ಅಂಥ ಮುಕ್ತಾಯ ಅಥವಾ ರದ್ದಿಯಾತಿಯ ತರುವಾಯ ರೂಢಿಗತ ಅಪರಾಧಿಯು ಒಬ್ಬ ನೋಂದಾಯಿತ ಅಪರಾಧಿಯಾಗಿರುವುದು ಕೊನೆಗೊಳ್ಳತಕ್ಕದ್ದು.

(2) ನೋಂದಣಿಯನ್ನು ರದ್ದು ಮಾಡಿದ್ದರೂ ಅಥವಾ ಅದರ ಅವಧಿಯು ಮುಕ್ತಾಯಗೊಂಡಿದ್ದರೂ, ನೋಂದಣಿಗೆ ಸಂಬಂಧಪಟ್ಟ ಈ ಅಧಿನಿಯಮದ ಉಪಬಂಧಗಳಿಗನುಸಾರವಾಗಿ, ಅಂಥ ರದ್ದಿಯಾತಿ ಅಥವಾ ಮುಕ್ತಾಯದ ತರುವಾಯ ಯಾವುದೇ ಕಾಲದಲ್ಲಿ ಒಬ್ಬ ರೂಢಿಗತ ಅಪರಾಧಿಯನ್ನು ಒಂದು ಅಥವಾ ಅದಕ್ಕಿಂತ ಹೆಚ್ಚಿನ ಅನುಸೂಚಿತ ಅಪರಾಧಗಳಿಗೆ ಸಂಬಂಧಿಸಿದಂತೆ ಅಪರಾಧಿ ಎಂದು ನಿರ್ಣಯಿಸಿದಾಗಲೆಲ್ಲಾ ಅವನನ್ನು ಮರು ನೋಂದಾಯಿಸಬಹುದು ಮತ್ತು ಆ ಮರು ನೋಂದಣಿಯು, ಜಿಲ್ಲಾ ಮ್ಯಾಜಿಸ್ಟ್ರೇಟನು ಲಿಖಿತದಲ್ಲಿ ಕಾರಣಗಳನ್ನು ದಾಖಲು ಮಾಡಿ, ಅದಕ್ಕಿಂತ ಮುಂಚೆ ರದ್ದುಪಡಿಸಿದ್ದ ಹೊರತು ಅಂಥ ಮರು ನೋಂದಣಿಯ ದಿನಾಂಕದಿಂದ ಐದು ವರ್ಷಗಳು ಮುಕ್ತಾಯವಾದ ಮೇಲೆ ಜಾರಿಯಲ್ಲಿರುವುದು ನಿಂತುಹೋಗತಕ್ಕದ್ದು.

(3) (1) ಮತ್ತು (2)ನೇ ಉಪ ಪ್ರಕರಣಗಳಲ್ಲಿ ಏನೇ ಒಳಗೊಂಡಿದ್ದರೂ, ನೋಂದಾಯಿತ ಒಬ್ಬ ಅಪರಾಧಿಯು ನೋಂದಣಿಯ ಅಥವಾ ಮರು ನೋಂದಣಿಯ ಅವಧಿಯಲ್ಲಿ, ಒಂದು ಅಥವಾ ಅದಕ್ಕಿಂತ ಹೆಚ್ಚಿನ ಅನುಸೂಚಿತ ಅಪರಾಧಗಳಿಗೆ ಸಂಬಂಧಿಸಿದಂತೆ ಅಪರಾಧಿ ಎಂದು ನಿರ್ಣೀತನಾಗಿರುವಲ್ಲಿ ಮತ್ತು ಗಣನೀಯವಾದ ಒಂದು ಅವಧಿಯ ಕಾರಾವಾಸದ ಶಿಕ್ಷೆಗೆ ಗುರಿಯಾಗಿರುವಲ್ಲಿ , ನೋಂದಣಿ ಅಥವಾ ಮರು ನೋಂದಣಿಯ ಅವಧಿಯನ್ನು ಅಂಥ ಕಾರಾವಾಸದಿಂದ ಅವನು ಬಿಡುಗಡೆಯಾದ ದಿನಾಂಕದಿಂದ ಐದು ವರ್ಷಗಳ ಒಂದು ಅವಧಿಯವರೆಗೆ ವಿಸ್ತರಿಸತಕ್ಕದ್ದು.

**10. ನೋಂದಣಿ ಮತ್ತು ಮರು ನೋಂದಣಿ, ಇತ್ಯಾದಿಯ ವಿರುದ್ಧ ಮನವಿಗಳನ್ನು ಸಲ್ಲಿಸುವ ಹಕ್ಕು.-** (1) ಸಂದರ್ಭಾನುಸಾರ 4ನೇ ಪ್ರಕರಣದ ಅಡಿಯಲ್ಲಿ ಅಥವಾ ಸಂದರ್ಭಾನುಸಾರ 9ನೇ ಪ್ರಕರಣದ ಅಡಿಯಲ್ಲಿ ಅಥವಾ 7ನೇ ಪ್ರಕರಣದ (2)ನೇ ಉಪ ಪ್ರಕರಣದ ಅಡಿಯಲ್ಲಿ ತನ್ನ ಹೆಸರಿನ ನೋಂದಣಿ ಅಥವಾ ಮರು ನೋಂದಣಿಯ ಆದೇಶದಿಂದ ಬಾಧಿತನಾಗಿರುವುದಾಗಿ ಭಾವಿಸುವ ಯಾರೇ ವ್ಯಕ್ತಿಯು, ನಿಯಮಿಸಲಾದ ಅವಧಿಯೊಳಗಾಗಿ ಅಂಥ ನೋಂದಣಿ, ಮರು ನೋಂದಣಿ ಅಥವಾ ಆದೇಶದ ವಿರುದ್ಧ ರಾಜ್ಯ ಸರ್ಕಾರಕ್ಕೆ ಒಂದು ಮನವಿಯನ್ನು ಸಲ್ಲಿಸಬಹುದು.

(2) ರಾಜ್ಯ ಸರ್ಕಾರವು, ಮನವಿಯನ್ನು ಪರ್ಯಾಲೋಚಿಸಿದ ಮತ್ತು ಬಾಧಿತನಾದ ವ್ಯಕ್ತಿಗೆ ನಿಯಮಿಸಲಾದ ರೀತಿಯಲ್ಲಿ ಅಹವಾಲನ್ನು ಹೇಳಿಕೊಳ್ಳಲು ಅವಕಾಶವನ್ನು ಕೊಟ್ಟ ತರುವಾಯ, ಅವಶ್ಯವಾದರೆ, ಸಂದರ್ಭಾನುಸಾರ, ನೋಂದಣಿ, ಮರು ನೋಂದಣಿ ಅಥವಾ ಆದೇಶವನ್ನು ಸ್ಥಿರೀಕರಿಸತಕ್ಕದ್ದು ಅಥವಾ ರದ್ದುಗೊಳಿಸತಕ್ಕದ್ದು ಮತ್ತು ಸ್ಥಿರೀಕರಿಸಲಾದ ಸಂದರ್ಭದಲ್ಲಿ, ಅದಕ್ಕೆ ಇರುವ ಕಾರಣಗಳ ಬಗ್ಗೆ ಸಂಕ್ಷಿಪ್ತ ವಿವರಣೆಯನ್ನು ದಾಖಲು ಮಾಡತಕ್ಕದ್ದು.

**11. ಒಬ್ಬ ನೋಂದಾಯಿತ ಅಪರಾಧಿಯ ಚಲನವಲನವನ್ನು ನಿರ್ಬಂಧಿಸುವ ಅಧಿಕಾರ.-** (1) ರಾಜ್ಯ ಸರ್ಕಾರವು, ಸಾರ್ವಜನಿಕ ಹಿತಾಸಕ್ತಿಯ ದೃಷ್ಟಿಯಿಂದ, ಅಂಥ ಪ್ರದೇಶದಲ್ಲಿ (ಇದರಲ್ಲಿ ಇನ್ನು ಮುಂದೆ " ನಿರ್ಬಂಧಿತ ಪ್ರದೇಶ " ಎಂದು ಕರೆಯಲಾಗಿದೆ) ಯಾರೇ ನೋಂದಾಯಿತ ಅಪರಾಧಿಯ ಚಲನವಲನವನ್ನು ಮತ್ತು ಆದೇಶದಲ್ಲಿ ನಿರ್ದಿಷ್ಟಪಡಿಸಲಾದ ಮೂರು ವರ್ಷಗಳನ್ನು ಮೀರದ ಅಂಥ ಅವಧಿಯವರೆಗೆ ಆದೇಶದ ಮೂಲಕ ನಿರ್ಬಂಧಿಸಲು ನಿರ್ದೇಶನ ನೀಡುವುದು ಅವಶ್ಯಕವೆಂದು ಅಥವಾ ಯುಕ್ತವೆಂದು ಅಭಿಪ್ರಾಯಪಟ್ಟರೆ, ಅದು ಹಾಗೆ ಮಾಡಬಹುದು.

(2) ಅಂಥ ಯಾವುದೇ ಆದೇಶವನ್ನು ಮಾಡುವುದಕ್ಕೆ ಮುಂಚೆ ರಾಜ್ಯ ಸರ್ಕಾರವು ಈ ಮುಂದಿನ ವಿಷಯಗಳನ್ನು, ಎಂದರೆ:-

(ಎ) ನೋಂದಾಯಿತ ಅಪರಾಧಿಯನ್ನು ಅಪರಾಧಿ ಎಂದು ನಿರ್ಣಯಿಸಲಾಗಿರುವ ಅಪರಾಧಗಳ ಸ್ವರೂಪ ಮತ್ತು ಅ ಅಪರಾಧಗಳು ಘಟಿಸಿದಂಥ ಸಂದರ್ಭಗಳ ಬಗ್ಗೆ;

(ಬಿ) ನೋಂದಾಯಿತ ಅಪರಾಧಿಯು ಕಾನೂನು ಸಮ್ಮತವಾದ ಯಾವುದೇ ವೃತ್ತಿಯನ್ನು ನಡೆಸುತ್ತಿರುವನೇ ಮತ್ತು ಅಂಥ ವೃತ್ತಿಯು ಪ್ರಾಮಾಣಿಕ ಮತ್ತು ವ್ಯವಸ್ಥಿತ ಜೀವನ ವಿಧಾನಕ್ಕೆ ಅನುಕೂಲಕರವಾಗಿದೆಯೇ ಮತ್ತು ಅಪರಾಧಗಳನ್ನು ಮಾಡಲು ಅನುಕೂಲ ಮಾಡಿಕೊಡುವ ಉದ್ದೇಶಕ್ಕಾಗಿ ಅದು ಕೇವಲ ಒಂದು ನೆಪವಾಗಿಲ್ಲವೆ ಎಂಬ ಬಗ್ಗೆ;

(ಸಿ) ಅವನ ಚಲನ ವಲನಗಳನ್ನು ನಿರ್ಬಂಧಿಸಬೇಕಾಗಿರುವ ಪ್ರದೇಶದ ಸೂಕ್ತತೆಯ ಬಗ್ಗೆ ; ಮತ್ತು

(ಡಿ) ನೋಂದಾಯಿತ ಅಪರಾಧಿಯು ನಿರ್ಬಂಧಿತ ಪ್ರದೇಶದೊಳಗೆ ತನ್ನ ಜೀವನವನ್ನು ನಡೆಸಬಹುದಾದಂಥ ರೀತಿ ಮತ್ತು ಅದಕ್ಕಾಗಿ ಲಭ್ಯವಿರುವ ಅಥವಾ ಲಭ್ಯವಾಗುವ ಸಂಭವವಿರುವಂಥ ವ್ಯವಸ್ಥೆಗಳು ಸಾಕಷ್ಟು ಇವೆಯೇ ಎಂಬ ಬಗ್ಗೆ

- ಪರ್ಯಾಲೋಚಿಸತಕ್ಕದ್ದು.

(3) ಆದೇಶದ ಒಂದು ಪ್ರತಿಯನ್ನು ನಿಯಮಿಸಲಾದ ರೀತಿಯಲ್ಲಿ ನೋಂದಾಯಿತ ಅಪರಾಧಿಗೆ ಜಾರಿ ಮಾಡತಕ್ಕದ್ದು.

1. ಕರ್ನಾಟಕ ಕಾನೂನುಗಳ ಅಳವಡಿಕೆ ಆದೇಶ, 1973ರ ಮೂಲಕ 1.11.1973ರಿಂದ ಜಾರಿಗೆ ಬರುವಂತೆ ಅಳವಡಿಸಲಾಗಿದೆ.

**12. ಚಲನವಲನದ ಮೇಲಣ ನಿರ್ಬಂಧಗಳನ್ನು ರದ್ದುಗೊಳಿಸುವ ಅಥವಾ ಬದಲಾಯಿಸುವ ಅಧಿಕಾರ.-** ರಾಜ್ಯ ಸರ್ಕಾರವು, ಆದೇಶದ ಮೂಲಕ, 11ನೇ ಪ್ರಕರಣದ ಅಡಿಯಲ್ಲಿ ಮಾಡಿದ ಯಾವುದೇ ಆದೇಶವನ್ನು ರದ್ದುಗೊಳಿಸಬಹುದು ಅಥವಾ ಆ ಪ್ರಕರಣದ ಅಡಿಯಲ್ಲಿ ಆದೇಶದಲ್ಲಿ ನಿರ್ದಿಷ್ಟಪಡಿಸಲಾದ ಯಾವುದೇ ಪ್ರದೇಶವನ್ನು ಬದಲಾಯಿಸಬಹುದು :

ಪರಂತು, ಅಂಥ ಆದೇಶವನ್ನು ಮಾಡುವುದಕ್ಕೆ ಮುಂಚೆ, ರಾಜ್ಯ ಸರ್ಕಾರವು, 11ನೇ ಪ್ರಕರಣದ (2)ನೇ ಉಪಪ್ರಕರಣದಲ್ಲಿ ಉಲ್ಲೇಖಿಸಿದ ವಿಷಯಗಳನ್ನು ಅನ್ವಯವಾಗಬಹುದಾದಷ್ಟರ ಮಟ್ಟಿಗೆ ಪರ್ಯಾಲೋಚಿಸತಕ್ಕದ್ದು.

## ಅಧ್ಯಾಯ -III

## ರೂಢಿಗತ ಅಪರಾಧಿಗಳ ಸುಧಾರಕ ತರಬೇತಿ

**13. ಸುಧಾರಕ ವ್ಯವಸ್ಥಾಪನಾ ಕೇಂದ್ರಗಳ ಸ್ಥಾಪನೆ.-** (1) ರಾಜ್ಯ ಸರ್ಕಾರವು, ಅಧಿಸೂಚನೆಯ ಮೂಲಕ, ಈ ಅಧಿನಿಯಮದ ಅಡಿಯಲ್ಲಿ ಸುಧಾರಕ ತರಬೇತಿಯನ್ನು ಪಡೆಯಬೇಕೆಂದು ನಿರ್ದೇಶಿಸಲಾಗಿರುವ ರೂಢಿಗತ ಅಪರಾಧಿಗಳನ್ನು ಇಡುವ ಉದ್ದೇಶಕ್ಕಾಗಿ, ತಾನು ಸೂಕ್ತವೆಂದು ಪರ್ಯಾಲೋಚಿಸುವಷ್ಟು ಸಂಖ್ಯೆಯ ಸುಧಾರಕ ವ್ಯವಸ್ಥಾಪನಾ ಕೇಂದ್ರಗಳನ್ನು ರಾಜ್ಯದಲ್ಲಿ ಸ್ಥಾಪಿಸಬಹುದು ಮತ್ತು ನಡೆಸಬಹುದು.

(2) ರಾಜ್ಯ ಸರ್ಕಾರವು, ನಿರ್ದಿಷ್ಟಪಡಿಸಲಾದ ಷರತ್ತುಗಳಿಗೆ ಒಳಪಟ್ಟು, ಈ ಅಧಿನಿಯಮದ ಉದ್ದೇಶಕ್ಕಾಗಿ ರಾಜ್ಯ ಸರ್ಕಾರವಲ್ಲದೆ, ಸುಧಾರಕ ವ್ಯವಸ್ಥಾಪನಾ ಕೇಂದ್ರವೆಂದು ಇತರ ವ್ಯಕ್ತಿಗಳು ಸ್ಥಾಪಿಸಿದ ಅಥವಾ ನಡೆಸಿಕೊಂಡು ಬಂದ ಯಾವುದೇ ಸಂಸ್ಥೆಗೆ (ಒಂದು ವ್ಯವಸ್ಥಾಪನಾ ಕೇಂದ್ರ ಎಂದು ಅಥವಾ ಅನ್ಯಥಾ ಕರೆಯಲಾಗಿರಲಿ) ಅನುಮೋದನೆಯನ್ನು ಸಹ ನೀಡಬಹುದು ಅಥವಾ ಪ್ರಮಾಣೀಕರಿಸಬಹುದು.

**14. ಸುಧಾರಕ ತರಬೇತಿಯನ್ನು ಪಡೆಯಬೇಕೆಂದು ರೂಢಿಗತ ಅಪರಾಧಿಗೆ ನಿರ್ದೇಶಿಸುವ ಅಧಿಕಾರ.-** (1) ಜಿಲ್ಲಾ ಮ್ಯಾಜಿಸ್ಟ್ರೇಟನ ಒಂದು ವರದಿಯಿಂದ ಅಥವಾ ಅನ್ಯಥಾ ಒಬ್ಬ ನೋಂದಾಯಿತ ಅಪರಾಧಿಯ ಸುಧಾರಣೆಗಾಗಿ ಮತ್ತು ಅಪರಾಧದ ಪ್ರತಿಬಂಧಕ್ಕಾಗಿ ನೋಂದಾಯಿತ ಅಪರಾಧಿಯು ಒಂದು ಗಣನೀಯ ಅವಧಿಗಾಗಿ ಒಂದು ಸುಧಾರಕ ಸ್ವರೂಪದ ತರಬೇತಿಯನ್ನು ಪಡೆಯುವುದು ಯುಕ್ತವೆಂದು ರಾಜ್ಯ ಸರ್ಕಾರಕ್ಕೆ ಮನದಟ್ಟಾದಲ್ಲಿ, ರಾಜ್ಯ ಸರ್ಕಾರವು, ಒಂದು ಲಿಖಿತ ಆದೇಶದ ಮೂಲಕ, ನೋಂದಾಯಿತ ಅಪರಾಧಿಯು, ಅವನ ನೋಂದಣಿ ಅಥವಾ ಮರು ನೋಂದಣಿಯ ಅವಧಿಯನ್ನು ಮೀರದಂಥ ಅವಧಿಗಾಗಿ ಆದೇಶದಲ್ಲಿ ನಿರ್ದಿಷ್ಟಪಡಿಸಬಹುದಾದಂಥ ಸುಧಾರಕ ಸ್ವರೂಪದ ತರಬೇತಿಯನ್ನು ಪಡೆಯತಕ್ಕದ್ದೆಂದು ನಿರ್ದೇಶಿಸಬಹುದು.

(2) ನಲವತ್ತು ವರ್ಷಗಳಿಗಿಂತ ಹೆಚ್ಚು ವಯಸ್ಸಿನವನಲ್ಲದ ಒಬ್ಬ ರೂಢಿಗತ ಅಪರಾಧಿಯನ್ನು,-

(ಎ) ಕಾರಾವಾಸದಿಂದ ದಂಡನೀಯವಾದ ಯಾವುದೇ ಅಪರಾಧದ ಅಪರಾಧಿ ಎಂದು ನಿರ್ಣಯಿಸಿದಾಗ; ಅಥವಾ

(ಬಿ) ಸಂಹಿತೆಯ 110ನೇ ಪ್ರಕರಣಕ್ಕನುಸಾರವಾಗಿ ತನ್ನ ಒಳ್ಳೆಯ ನಡತೆಗಾಗಿ ಒಂದು ಬಂಧ ಪತ್ರವನ್ನು ಬರೆದುಕೊಡಲು ಅಗತ್ಯಪಡಿಸಿರುವಾಗ; ಮತ್ತು

- ಪ್ರಕರಣದ ಸಾಕ್ಷ್ಯದಿಂದ ಮತ್ತು ದಾಖಲೆಯಲ್ಲಿರುವ ಇತರ ವಿಷಯಗಳಿಂದ ಅವನ ಸುಧಾರಣೆಗಾಗಿ ಮತ್ತು ಅಪರಾಧದ ಪ್ರತಿಬಂಧಕ್ಕಾಗಿ ಅವನು ಒಂದು ಗಣನೀಯವಾದ ಅವಧಿಗಾಗಿ ಒಂದು ಸುಧಾರಕ ಸ್ವರೂಪದ ತರಬೇತಿಯನ್ನು ಪಡೆಯುವುದು ಯುಕ್ತವೆಂದು ನ್ಯಾಯಾಲಯಕ್ಕೆ ಅಥವಾ ಜಿಲ್ಲಾ ಮ್ಯಾಜಿಸ್ಟ್ರೇಟನಿಗೆ ಮನದಟ್ಟಾದಾಗ, ನ್ಯಾಯಾಲಯವು ಅಥವಾ ಜಿಲ್ಲಾ ಮ್ಯಾಜಿಸ್ಟ್ರೇಟನು ಅಂಥ ಅಪರಾಧಕ್ಕಾಗಿ ಅವನನ್ನು ಶಿಕ್ಷಿಸುವುದಕ್ಕೆ ಅಥವಾ ಸಂದರ್ಭಾನುಸಾರ ಅಂಥ ಬಂಧಪತ್ರವನ್ನು ಬರೆದುಕೊಡುವಂತೆ ಅಗತ್ಯಪಡಿಸುವುದಕ್ಕೆ ಬದಲಾಗಿ ನ್ಯಾಯಾಲಯ ಅಥವಾ ಮ್ಯಾಜಿಸ್ಟ್ರೇಟನು ನಿರ್ಧರಿಸಬಹುದಾದಂತೆ ಅವನು ಎರಡು ವರ್ಷಕ್ಕಿಂತ ಕಡಿಮೆಯಿಲ್ಲದ ಅಥವಾ ಐದು ವರ್ಷಗಳಿಗಿಂತ ಹೆಚ್ಚಿಲ್ಲದಂಥ ಅವಧಿಗಾಗಿ ಸುಧಾರಕ ತರಬೇತಿಯನ್ನು ಪಡೆಯತಕ್ಕದ್ದೆಂದು ನಿರ್ದೇಶಿಸಬಹುದು.

(3) (1)ನೇ ಉಪ ಪ್ರಕರಣ ಅಥವಾ (2)ನೇ ಉಪ ಪ್ರಕರಣದ ಅಡಿಯಲ್ಲಿ ಯಾವುದೇ ನಿರ್ದೇಶನವನ್ನು ನೀಡುವುದಕ್ಕೆ ಮುಂಚೆ, ಸಂದರ್ಭಾನುಸಾರ ರಾಜ್ಯ ಸರ್ಕಾರ ಅಥವಾ ನ್ಯಾಯಾಲಯ ಅಥವಾ ಮ್ಯಾಜಿಸ್ಟ್ರೇಟನು,-

(ಎ) ಅಪರಾಧಿಯ ದೈಹಿಕ ಮತ್ತು ಮಾನಸಿಕ ಸ್ಥಿತಿಯನ್ನು ಮತ್ತು ಸುಧಾರಕ ವ್ಯವಸ್ಥಾಪನಾ ಕೇಂದ್ರದಲ್ಲಿ ಸುಧಾರಕ ತರಬೇತಿಯನ್ನು ಪಡೆಯಲು ಅವನು ಅರ್ಹನಿರುವನೇ ಎಂಬುದನ್ನು ಪರಿಗಣಿಸತಕ್ಕದ್ದು; ಮತ್ತು

(ಬಿ) ಅಂಥ ನಿರ್ದೇಶನಗಳನ್ನು ಏಕೆ ನೀಡಕೂಡದು ಎಂಬ ಬಗ್ಗೆ ಕಾರಣ ತೋರಿಸಲು ಅಪರಾಧಿಗೆ ಒಂದು ಯುಕ್ತ ಅವಕಾಶವನ್ನು ಕೊಡತಕ್ಕದ್ದು.

(4) ಸುಧಾರಕ ತರಬೇತಿಯನ್ನು ಪಡೆಯುವಂತೆ ನಿರ್ದೇಶನ ನೀಡಲಾಗಿರುವ ಒಬ್ಬ ರೂಢಿಗತ ಅಪರಾಧಿಯನ್ನು ಅವನ ತರಬೇತಿಯ ಅವಧಿಯವರೆಗೆ ಸುಧಾರಕ ವ್ಯವಸ್ಥಾಪನಾ ಕೇಂದ್ರದಲ್ಲಿ ಇಡತಕ್ಕದ್ದು ಮತ್ತು ಅಂಥ ವ್ಯವಸ್ಥಾಪನಾ ಕೇಂದ್ರದಲ್ಲಿರುವಾಗ ನಿಯಮಿಸಬಹುದಾದಂಥ ರೀತಿಯಲ್ಲಿ ಅವನ ಬಗ್ಗೆ ವ್ಯವಹರಿಸತಕ್ಕದ್ದು.

**15. ಸುಧಾರಕ ವ್ಯವಸ್ಥಾಪನಾ ಕೇಂದ್ರದಿಂದ ವರ್ಗಾವಣೆ ಮಾಡುವ ಅಧಿಕಾರ.-** ರಾಜ್ಯ ಸರ್ಕಾರವು ಅಥವಾ ಈ ಬಗ್ಗೆ ಅದು ಪ್ರಾಧಿಕೃತಗೊಳಿಸಿದ ಯಾರೇ ಇತರ ಅಧಿಕಾರಿಯು, ಯಾವುದೇ ಕಾಲದಲ್ಲಿ, ಲಿಖಿತ ಆದೇಶದ ಮೂಲಕ, ಒಂದು ಸುಧಾರಕ ವ್ಯವಸ್ಥಾಪನಾ ಕೇಂದ್ರದಲ್ಲಿರುವ ಯಾರೇ ರೂಢಿಗತ ಅಪರಾಧಿಯನ್ನು ಇನ್ನೊಂದು ಸುಧಾರಕ ವ್ಯವಸ್ಥಾಪನಾ ಕೇಂದ್ರಕ್ಕೆ ವರ್ಗಾಯಿಸುವಂತೆ ನಿರ್ದೇಶಿಸಬಹುದು.

## ಅಧ್ಯಾಯ -IV

## ದಂಡಗಳು ಮತ್ತು ಕಾರ್ಯವಿಧಾನ

**16. ಈ ಅಧಿನಿಯಮದ ಕೆಲವು ಉಪಬಂಧಗಳನ್ನು ಪಾಲಿಸಲು ತಪ್ಪಿದ್ದಕ್ಕಾಗಿ ದಂಡ.-** ಕಾರಣಗಳನ್ನು ರುಜುವಾತುಪಡಿಸಬೇಕಾದ ಹೊಣೆ ಇರತಕ್ಕ ಒಬ್ಬ ರೂಢಿಗತ ಅಪರಾಧಿಯು ಅಂಥ ಯಾವುದೇ ಕಾನೂನು ಬದ್ಧ ಕಾರಣವಿಲ್ಲದೆ,-

(ಎ) 4ನೇ ಪ್ರಕರಣದ ಅಡಿಯಲ್ಲಿ ಹೊರಡಿಸಿದ ನೋಟೀಸಿಗನುಸಾರವಾಗಿ ಹಾಜರಾಗಲು ತಪ್ಪಿದಲ್ಲಿ; ಅಥವಾ

(ಬಿ) ಆ ಪ್ರಕರಣದ ಅಡಿಯಲ್ಲಿ ಅಗತ್ಯಪಡಿಸಿದ ಯಾವುದೇ ಮಾಹಿತಿಯನ್ನು ಒದಗಿಸಲು ಉದ್ದೇಶಪೂರ್ವಕವಾಗಿ ತಪ್ಪಿದಲ್ಲಿ ಅಥವಾ ಅವನು ಸುಳ್ಳೆಂದು ತಿಳಿದಿರುವ ಅಥವಾ ಹಾಗೆ ನಂಬಲು ಕಾರಣವಿರುವ ಅಥವಾ ಅದು ನಿಜವಾಗಿದೆ ಎಂದು ನಂಬದಿರುವ ಯಾವುದೇ ಮಾಹಿತಿಯನ್ನು ನಿಜವಾದುದು ಎಂದು ಒದಗಿಸಿದಲ್ಲಿ; ಅಥವಾ

(ಸಿ) 4ನೇ ಪ್ರಕರಣ ಅಥವಾ 6ನೇ ಪ್ರಕರಣದ ಅಡಿಯಲ್ಲಿನ ಆದೇಶದ ಅಡಿಯಲ್ಲಿ ಕಾರ್ಯ ನಿರ್ವಹಿಸುತ್ತಿರುವ ಯಾರೇ ವ್ಯಕ್ತಿ ತನ್ನ ಬೆರಳು ಮತ್ತು ಅಂಗೈ ಮುದ್ರೆಗಳನ್ನು, ಪಾದದ ಗುರುತುಗಳನ್ನು ಮತ್ತು ಛಾಯಾ ಚಿತ್ರಗಳನ್ನು ತೆಗೆಯಲು ಅನುಮತಿ ನಿರಾಕರಿಸಿದಲ್ಲಿ; ಅಥವಾ

(ಡಿ) 7ನೇ ಪ್ರಕರಣದ (1)ನೇ ಉಪ ಪ್ರಕರಣದ ಉಪಬಂಧಗಳನ್ನು ಅಥವಾ 7ನೇ ಪ್ರಕರಣದ (2)ನೇ ಉಪ ಪ್ರಕರಣದ ಅಡಿಯಲ್ಲಿನ ಜಿಲ್ಲಾ ಮ್ಯಾಜಿಸ್ಟ್ರೇಟನ ಆದೇಶವನ್ನು ಅಥವಾ 11ನೇ ಪ್ರಕರಣದ ಅಡಿಯಲ್ಲಿನ ರಾಜ್ಯ ಸರ್ಕಾರದ ಆದೇಶವನ್ನು ಪಾಲಿಸಲು ತಪ್ಪಿದಲ್ಲಿ

-ಅವನನ್ನು ವಾರೆಂಟಿಲ್ಲದೆ ದಸ್ತಗಿರಿ ಮಾಡಬಹುದು ಮತ್ತು ಅವನು,-

(i) ಮೊದಲ ಅಪರಾಧ ನಿರ್ಣಯವಾದ ಮೇಲೆ , ಆರು ತಿಂಗಳುಗಳಿಗೆ ವಿಸ್ತರಿಸಬಹುದಾದ ಅವಧಿಯವರೆಗಿನ ಕಾರಾವಾಸದಿಂದ ಅಥವಾ ಇನ್ನೂರು ರೂಪಾಯಿಗಳ ವರೆಗೆ ವಿಸ್ತರಿಸಬಹುದಾದ ಜುಲ್ಮಾನೆಯಿಂದ ಅಥವಾ ಅವರೆಡರಿಂದಲೂ ; ಮತ್ತು

(ii) ಎರಡನೇ ಅಥವಾ ಅದಕ್ಕೆ ತರುವಾಯದ ಅಪರಾಧ ನಿರ್ಣಯವಾದ ಮೇಲೆ, ಒಂದು ವರ್ಷಕ್ಕೆ ವಿಸ್ತರಿಸಬಹುದಾದ ಅವಧಿಯವರೆಗಿನ ಕಾರಾವಾಸದಿಂದ ಅಥವಾ ಐದು ನೂರು ರೂಪಾಯಿಗಳವರೆಗೆ ವಿಸ್ತರಿಸಬಹುದಾದ ಜುಲ್ಮಾನೆಯಿಂದ ಅಥವಾ ಅವೆರಡರಿಂದಲೂ

- ದಂಡಿತನಾಗತಕ್ಕದ್ದು :

ಪರಂತು, ಸುಧಾರಕ ವ್ಯವಸ್ಥಾಪನಾ ಕೇಂದ್ರದಲ್ಲಿ ಸುಧಾರಕ ಸ್ವರೂಪದ ತರಬೇತಿ ಪಡೆಯಲು ಅಪರಾಧಿಯು ಅರ್ಹನಿರುವನೇ ಎಂಬ ಬಗ್ಗೆ ಅವನ ವಯಸ್ಸು ಹಾಗೂ ದೈಹಿಕ ಮತ್ತು ಮಾನಸಿಕ ಸ್ಥಿತಿಯನ್ನು ಪರಿಗಣಿಸಿದ ತರುವಾಯ, ಅವನ ಸುಧಾರಣೆಗೆ ಮತ್ತು ಅಪರಾಧ ತಡೆಗಟ್ಟಲು, ಅವನು, ಗಣನೀಯ ಕಾಲದವರೆಗೆ ಸುಧಾರಕ ಸ್ವರೂಪದ ತರಬೇತಿಯನ್ನು ಪಡೆಯುವುದು ಯುಕ್ತವೆಂದು ನ್ಯಾಯಾಲಯಕ್ಕೆ ಮನದಟ್ಟಾದರೆ , ನ್ಯಾಯಾಲಯವು ಈ ಪ್ರಕರಣದ ಅಡಿಯಲ್ಲಿನ ಯಾವುದೇ ದಂಡನೆಯಿಂದ ಅಪರಾಧಿಯನ್ನು ಶಿಕ್ಷಿಸುವುದಕ್ಕೆ ಬದಲಾಗಿ ಕಾರಣವನ್ನು ತೋರಿಸುವ ಒಂದು ಅವಕಾಶವನ್ನು ಅವನಿಗೆ ಕೊಟ್ಟ ತರುವಾಯ, ಅವನು ಸುಧಾರಕ ವ್ಯವಸ್ಥಾಪನಾ ಕೇಂದ್ರದಲ್ಲಿ ತಾನು ನಿರ್ಧರಿಸಬಹುದಾದ ಎರಡು ವರ್ಷಗಳಿಗೆ ಕಡಿಮೆಯಿಲ್ಲದ ಅಥವಾ ಮೂರು ವರ್ಷಗಳಿಗಿಂತ ಹೆಚ್ಚಿಲ್ಲದ ಅವಧಿಯವರೆಗೆ ಸುಧಾರಕ ತರಬೇತಿಯನ್ನು ಪಡೆಯತಕ್ಕದ್ದೆಂದು ನಿರ್ದೇಶಿಸಬಹುದು.

**17. ನಿರ್ಬಂಧಿತ ಪ್ರದೇಶದಿಂದ ಅಥವಾ ಸುಧಾರಕ ವ್ಯವಸ್ಥಾಪನಾ ಕೇಂದ್ರದಿಂದ ಹೊರಗೆ ಕಂಡುಬರುವ ವ್ಯಕ್ತಿಗಳ ದಸ್ತಗಿರಿ.-** ಯಾರೇ ರೂಢಿಗತ ಅಪರಾಧಿಯು,-

(ಎ) ಯಾವ ಷರತ್ತುಗಳ ಮೇಲೆ ಅವನು ಅಂಥ ಪ್ರದೇಶದಿಂದ ಹೊರಹೋಗಲು ಅನುಮತಿಸಲಾಗಿರುವುದೋ ಅವನ್ನು ಉಲ್ಲಂಘಿಸಿ ನಿರ್ಬಂಧಿಸಲಾಗಿರುವ ಪ್ರದೇಶದ ಹೊರಗೆ ಅವನ ಚಲನವಲನ ಕಂಡು ಬಂದರೆ; ಅಥವಾ

(ಬಿ) ಅವನನ್ನು ಇಟ್ಟಿರುವ ಯಾವುದೇ ಸುಧಾರಕ ವ್ಯವಸ್ಥಾಪನಾ ಕೇಂದ್ರದಿಂದ ತಪ್ಪಿಸಿಕೊಂಡರೆ

- ಅವನನ್ನು ಪೊಲೀಸ್ ಅಧಿಕಾರಿ, ಪೊಲೀಸ್ ಪಟೇಲ ಅಥವಾ ಒಬ್ಬ ಗ್ರಾಮ ಪೊಲೀಸ್ ಸದಸ್ಯನು ವಾರಂಟು ಇಲ್ಲದೆ ದಸ್ತಗಿರಿ ಮಾಡಬಹುದು ಮತ್ತು ಮ್ಯಾಜಿಸ್ಟ್ರೇಟರ ಮುಂದೆ ಕರೆದೊಯ್ಯಬಹುದು, ಅವರು ಆ ಬಗೆಗಿನ ಸಂಗತಿಗಳನ್ನು ರುಜುವಾತುಪಡಿಸಿದ ಮೇಲೆ ಅಂಥ ಪ್ರದೇಶಕ್ಕೆ ಅಥವಾ ಸುಧಾರಕ ವ್ಯವಸ್ಥಾಪನಾ ಕೇಂದ್ರಕ್ಕೆ ಅವನನ್ನು ಕರೆದೊಯ್ಯಬೇಕೆಂದು, ಈ ಅಧಿನಿಯಮದ ಅಥವಾ ಅದರ ಅಡಿಯಲ್ಲಿ ರಚಿಸಿದ ನಿಯಮಗಳಿಗೆ ಅನುಸಾರವಾಗಿ ಅವನ ಬಗ್ಗೆ ವ್ಯವಹರಿಸತಕ್ಕದ್ದೆಂದು ಆದೇಶಿಸಬಹುದು.

## ಅಧ್ಯಾಯ -V

### ಸಂಕೀರ್ಣ

**18. ಅಧಿಕಾರ ವ್ಯಾಪ್ತಿಯ ನಿಷೇಧ.-** ಈ ಅಧಿನಿಯಮದ ಅಡಿಯಲ್ಲಿ ಹೊರಡಿಸಿದ ಯಾವುದೇ ನಿರ್ದೇಶನ ಅಥವಾ ಆದೇಶದ ಮಾನ್ಯತೆಯನ್ನು ಯಾವುದೇ ನ್ಯಾಯಾಲಯವು ಪ್ರಶ್ನಿಸತಕ್ಕದ್ದಲ್ಲ.

**19. ಕಾನೂನು ವ್ಯವಹರಣೆಗಳ ನಿಷೇಧ.-** ಈ ಅಧಿನಿಯಮದ ಅಡಿಯಲ್ಲಿ ಸದ್ಭಾವನೆಯಿಂದ ಮಾಡಿದ ಅಥವಾ ಮಾಡಲು ಉದ್ದೇಶಿಸಿದ ಯಾವುದೇ ಕಾರ್ಯಕ್ಕಾಗಿ ಯಾವುದೇ ದಾವೆ, ಪ್ರಾಸಿಕ್ಯೂಷನ್ ಅಥವಾ ಇತರ ಕಾನೂನು ವ್ಯವಹರಣೆಗಳನ್ನು ಯಾರೇ ವ್ಯಕ್ತಿಯ ವಿರುದ್ಧ ಹೂಡತಕ್ಕದ್ದಲ್ಲ.

**20. ಪ್ರತ್ಯಾಯೋಜಿಸುವ ಅಧಿಕಾರ.-** ರಾಜ್ಯ ಸರ್ಕಾರವು, ಸರ್ಕಾರಿ ರಾಜ್ಯಪತ್ರದಲ್ಲಿನ ಅಧಿಸೂಚನೆಯ ಮೂಲಕ, 21ನೇ ಪ್ರಕರಣದ ಅಡಿಯಲ್ಲಿನ ಅಧಿಕಾರವನ್ನು ಹೊರತುಪಡಿಸಿ, ಈ ಅಧಿನಿಯಮದ ಅಡಿಯಲ್ಲಿ ತಾನು ಚಲಾಯಿಸಬಹುದಾದ ಯಾವುದೇ ಅಧಿಕಾರವನ್ನು ಅಧಿಸೂಚನೆಯಲ್ಲಿ ನಿರ್ದಿಷ್ಟಪಡಿಸಬಹುದಾದಂಥ ಷರತ್ತುಗಳಿಗೆ ಮತ್ತು ನಿರ್ಬಂಧಗಳಿಗೆ ಒಳಪಟ್ಟು, ಅದರಲ್ಲಿ ನಿರ್ದಿಷ್ಟಪಡಿಸಬಹುದಾದಂಥ ಜಿಲ್ಲಾಧಿಕಾರಿಯ ದರ್ಜೆಗೆ ಕಡಿಮೆ ಇಲ್ಲದಂಥ ದರ್ಜೆಯ ಅಧಿಕಾರಿಯೂ ಸಹ ಚಲಾಯಿಸಬಹುದೆಂದು ನಿರ್ದೇಶಿಸಬಹುದು.

**21. ನಿಯಮ ರಚನಾಧಿಕಾರ.-** (1) ರಾಜ್ಯ ಸರ್ಕಾರವು, ಸರ್ಕಾರಿ ರಾಜ್ಯ ಪತ್ರದಲ್ಲಿನ ಅಧಿಸೂಚನೆಯ ಮೂಲಕ ಈ ಅಧಿನಿಯಮದ ಉದ್ದೇಶಗಳನ್ನು ಜಾರಿಗೊಳಿಸುವುದಕ್ಕಾಗಿ ನಿಯಮಗಳನ್ನು ರಚಿಸಬಹುದು.

(2) ವಿಶೇಷವಾಗಿ ಮತ್ತು ಈ ಹಿಂದೆ ಹೇಳಿದ ಅಧಿಕಾರದ ಸಾಮಾನ್ಯಾನ್ವಯಕ್ಕೆ ಬಾಧಕವಾಗದಂತೆ ಅಂಥ ನಿಯಮಗಳು ಈ ಮುಂದಿನ ಎಲ್ಲ ಅಥವಾ ಯಾವುದೇ ವಿಷಯಕ್ಕಾಗಿ ಉಪಬಂಧ ಕಲ್ಪಿಸಬಹುದು, ಎಂದರೆ:-

(ಎ) 4ನೇ ಪ್ರಕರಣದ ಅಡಿಯಲ್ಲಿನ ನೋಟೀಸಿನ ನಮೂನೆ ಮತ್ತು ಅಂಥ ನೋಟೀಸನ್ನು ಜಾರಿ ಮಾಡಬಹುದಾದಂಥ ರೀತಿ ;

(ಬಿ) ಆ ರೂಢಿಗತ ಅಪರಾಧಿಗಳ ರಿಜಿಸ್ಟರಿನ ನಮೂನೆ ಮತ್ತು ಅದರಲ್ಲಿ ನಮೂದಿಸಬೇಕಾದ ವಿವರಗಳು ;

(ಸಿ) 7ನೇ ಪ್ರಕರಣದ (1)ನೇ ಉಪ ಪ್ರಕರಣದ ಅಡಿಯಲ್ಲಿ ಸಾಮಾನ್ಯ ವಸತಿಯ ಯಾವುದೇ ಬದಲಾವಣೆ ಅಥವಾ ಉದ್ದೇಶಿತ ಬದಲಾವಣೆಯನ್ನು ತಿಳಿಸಬೇಕಾದ ಪ್ರಾಧಿಕಾರ ಮತ್ತು ವಿಧಾನ ;

(ಡಿ) ಚಲನವಲನಗಳನ್ನು ನಿರ್ಬಂಧಿಸಲಾಗಿರುವ ನೋಂದಾಯಿತ ಅಪರಾಧಿಗಳು ಪಾಲಿಸಬೇಕಾದ ನಿರ್ಬಂಧಗಳ ಸ್ವರೂಪ;

(ಇ) ನೋಂದಾಯಿತ ಅಪರಾಧಿಗಳಿಗೆ ಗುರುತಿನ ಪ್ರಮಾಣ ಪತ್ರದ ನೀಡಿಕೆ ಮತ್ತು ಅಂಥ ಪ್ರಮಾಣ ಪತ್ರಗಳ ಪರಿಶೀಲನೆ;

(ಎಫ್) ಅಪರಾಧಿಗಳ ಚಲನವಲನವನ್ನು ನಿರ್ಬಂಧಿಸಲಾದ ಪ್ರದೇಶವನ್ನು ಅಥವಾ ಅವರನ್ನು ಇಟ್ಟಿರುವಂಥ ಸುಧಾರಕ ವ್ಯವಸ್ಥಾಪನಾ ಕೇಂದ್ರಗಳಿಂದ ಹೊರಹೋಗಲು ಅನುಮತಿಸಬಹುದಾದ ಷರತ್ತುಗಳು;

(ಜಿ) ಸುಧಾರಕ ವ್ಯವಸ್ಥಾಪನಾ ಕೇಂದ್ರಗಳಿಂದ ಅಪರಾಧಿಗಳನ್ನು ಬಿಡುಗಡೆ ಮಾಡಬಹುದಾದ ನಿಬಂಧನೆಗಳು;

(ಹೆಚ್) ಸುಧಾರಕ ವ್ಯವಸ್ಥಾಪನಾ ಕೇಂದ್ರಗಳಲ್ಲಿರುವ ವ್ಯಕ್ತಿಗಳ ಶಿಸ್ತುಪಾಲನೆ ಮತ್ತು ನಡತೆಯೂ ಸೇರಿದಂತೆ, ಅವುಗಳ ಕಾರ್ಯ ನಿರ್ವಹಣೆ, ವ್ಯವಸ್ಥಾಪನೆ, ನಿಯಂತ್ರಣ ಮತ್ತು ಮೇಲ್ವಿಚಾರಣೆ;

(ಐ) ರಾಜ್ಯ ಸರ್ಕಾರದ್ದಲ್ಲದ, ಸುಧಾರಕ ವ್ಯವಸ್ಥಾಪನಾ ಕೇಂದ್ರಗಳೆಂದು ಇತರ ವ್ಯಕ್ತಿಗಳು ಸ್ಥಾಪಿಸಿದ ಅಥವಾ ನಡೆಸಿಕೊಂಡು ಬರುತ್ತಿರುವ ಸಂಸ್ಥೆಗಳಿಗೆ ಅನುಮೋದನೆ ನೀಡಲು ಅಥವಾ ಪ್ರಮಾಣೀಕರಿಸಲು ಇರುವ ಷರತ್ತುಗಳು ಮತ್ತು ವಿಧಾನ;

(ಜೆ) ಸುಧಾರಕ ವ್ಯವಸ್ಥಾಪನಾ ಕೇಂದ್ರಗಳಿಗೆ ಅಧಿಕಾರೇತರ ಸಂದರ್ಶಕರ ನೇಮಕಾತಿ;

(ಕೆ) ರೂಢಿಗತ ಅಪರಾಧಿಯ ಕುಟುಂಬದ ಸದಸ್ಯರು ಸುಧಾರಕ ವ್ಯವಸ್ಥಾಪನಾ ಕೇಂದ್ರದಲ್ಲಿ ಅವನೊಂದಿಗೆ ತಂಗಲು ಅನುಮತಿಸಬಹುದಾದ ಷರತ್ತುಗಳು ಮತ್ತು ಸನ್ನಿವೇಶಗಳು;

(ಎಲ್) ಚಲನವಲನಗಳನ್ನು ನಿರ್ಬಂಧಿಸಲಾದ ಅಥವಾ ಈ ಅಧಿನಿಯಮದ ಅಡಿಯಲ್ಲಿ ಸುಧಾರಕ ವ್ಯವಸ್ಥಾಪನಾ ಕೇಂದ್ರಗಳಲ್ಲಿ ಇಡಲಾಗಿರುವ ಎಲ್ಲ ವ್ಯಕ್ತಿಗಳಿಗೆ ಸಂಬಂಧಿಸಿದ ಪ್ರಕರಣಗಳ ನಿಯತಕಾಲಿಕ ಪರಿಶೀಲನೆ;

(ಎಂ) ಈ ಅಧಿನಿಯಮದ ಅಡಿಯಲ್ಲಿ ನಿಯಮಿಸಬೇಕಾದ ಅಥವಾ ನಿಯಮಿಸಬಹುದಾದ ಇತರ ಯಾವುದೇ ವಿಷಯ.

(3) ಈ ಅಧಿನಿಯಮದ ಅಡಿಯಲ್ಲಿ ನಿಯಮಗಳನ್ನು ರಚಿಸುವಲ್ಲಿ, ರಾಜ್ಯ ಸರ್ಕಾರವು, ಯಾವುದೇ ನಿಯಮದ ಉಲ್ಲಂಘನೆಯು ಆರು ತಿಂಗಳುಗಳಿಗೆ ವಿಸ್ತರಿಸಬಹುದಾದಂಥ ಕಾರಾವಾಸದಿಂದ ಅಥವಾ ಒಂದು ನೂರು ರೂಪಾಯಿಗಳಿಗೆ ವಿಸ್ತರಿಸಬಹುದಾದಂಥ ಜುಲ್ಮಾನೆಯಿಂದ ಅಥವಾ ಅವೆರಡರಿಂದಲೂ ದಂಡನೀಯವಾಗತಕ್ಕದ್ದೆಂದು ಉಪಬಂಧ ಕಲ್ಪಿಸಬಹುದು.

(4) ಈ ಪ್ರಕರಣದ ಅಡಿಯಲ್ಲಿ ರಚಿಸಲಾದ ಪ್ರತಿಯೊಂದು ನಿಯಮವನ್ನು ಅದನ್ನು ರಚಿಸಿದ ತರುವಾಯ, ಆದಷ್ಟು ಬೇಗನೆ, ರಾಜ್ಯ ವಿಧಾನ ಮಂಡಲದ ಪ್ರತಿಯೊಂದು ಸದನದ ಮುಂದೆ, ಅದು ಅಧಿವೇಶನದಲ್ಲಿರುವಾಗ ಒಂದು ಅಧಿವೇಶನದಲ್ಲಿ ಅಥವಾ ಎರಡು ಅಥವಾ ಹೆಚ್ಚು ಅನುಕ್ರಮ ಅಧಿವೇಶನಗಳಲ್ಲಿ ಅಡಕವಾಗಬಹುದಾಂಥ ಒಟ್ಟು ಮೂವತ್ತು ದಿವಸಗಳ ಅವಧಿಯವರೆಗೆ ಇಡತಕ್ಕದ್ದು ಮತ್ತು ಅದನ್ನು ಹಾಗೆ ಇಡಲಾದ ಅಧಿವೇಶನ ಅಥವಾ ನಿಕಟೋತ್ತರದ ಅಧಿವೇಶನದ ಮುಕ್ತಾಯಕ್ಕೆ ಮುಂಚೆ ಎರಡೂ ಸದನಗಳು ನಿಯಮದಲ್ಲಿ ಯಾವುದೇ ಮಾರ್ಪಾಟನ್ನು ಮಾಡಲು ಒಪ್ಪಿದರೆ ಅಥವಾ ನಿಯಮವನ್ನು ರಚಿಸಕೂಡದೆಂದು ಎರಡೂ ಸದನಗಳು ಒಪ್ಪಿದರೆ, ಆ ನಿಯಮವು, ಆ ತರುವಾಯ ಹಾಗೆ ಮಾರ್ಪಾಟಾದ ರೂಪದಲ್ಲಿ ಮಾತ್ರ ಪರಿಣಾಮಕಾರಿಯಾಗಿರತಕ್ಕದ್ದು ಅಥವಾ ಸಂದರ್ಭಾನುಸಾರ ಪರಿಣಾಮಕಾರಿಯಾಗತಕ್ಕದ್ದಲ್ಲ; ಆದಾಗ್ಯೂ, ಅಂಥ ಯಾವುದೇ ಮಾರ್ಪಾಟು ಅಥವಾ ರದ್ದಿಯಾತಿಯು ಆ ನಿಯಮದ ಮೇರೆಗೆ ಹಿಂದೆ ಮಾಡಿದ ಯಾವುದೇ ಕಾರ್ಯದ ಕಾನೂನು ಮಾನ್ಯತೆಗೆ ಬಾಧಕವನ್ನುಂಟು ಮಾಡತಕ್ಕದ್ದಲ್ಲ.

**22. ನಿರಸನ ಮತ್ತು ಉಳಿಸುವಿಕೆಗಳು.-** ಅನುಸೂಚಿ ಬಿ ಯಲ್ಲಿ ನಮೂದಿಸಿರುವ ಅಧಿನಿಯಮಿತಿಗಳನ್ನು ಈ ಮೂಲಕ ನಿರಸನಗೊಳಿಸಲಾಗಿದೆ:

ಪರಂತು, [1][ಕರ್ನಾಟಕ][1] ಸಾಮಾನ್ಯ ಖಂಡಗಳ ಅಧಿನಿಯಮ, 1899ರ ([1][1899ರ ಕರ್ನಾಟಕ][1] ಅಧಿನಿಯಮIII) 6 ನೇ ಪ್ರಕರಣವು, ಅಂಥ ನಿರಸನಕ್ಕೆ ಸಂಬಂಧಿಸಿದಂತೆ ಅನ್ವಯವಾಗತಕ್ಕದ್ದು ಮತ್ತು ಸದರಿ ಅಧಿನಿಯಮದ 8 ಮತ್ತು 24ನೇ ಪ್ರಕರಣಗಳು ಸದರಿ ಅಧಿನಿಯಮಿತಿಗಳನ್ನು ಈ ಅಧಿನಿಯಮದ ಮೂಲಕ ನಿರಸನಗೊಳಿಸಿದ್ದಿದ್ದರೆ ಮತ್ತು ಮರು ಅಧಿನಿಯಮಿತಿಗೊಳಿಸಿದ್ದಿದ್ದರೆ ಹೇಗೋ ಹಾಗೆ ಅನ್ವಯವಾಗತಕ್ಕದ್ದು:

1. ಕರ್ನಾಟಕ ಕಾನೂನುಗಳ ಅಳವಡಿಕೆ ಆದೇಶ, 1973ರ ಮೂಲಕ 1.11.1973ರಿಂದ ಜಾರಿಗೆ ಬರುವಂತೆ ಅಳವಡಿಸಲಾಗಿದೆ.

ಮತ್ತೂ ಪರಂತು, ಈ ಅಧಿನಿಯಮದ ಪ್ರಾರಂಭಕ್ಕೆ ನಿಕಟ ಪೂರ್ವದಲ್ಲಿ ಯಾವುದೇ ನಿರಸಿತ ಅಧಿನಿಯಮಿತಿಯ ಮೇರೆಗೆ,-

(i) ಯಾರೇ ವ್ಯಕ್ತಿಯು ಅಧಿಸೂಚಿತ ಅಪರಾಧಿಯಾಗಿದ್ದರೆ; ಅಥವಾ

(ii) ಯಾರೇ ವ್ಯಕ್ತಿಯ ವಿರುದ್ಧ ನಿರ್ಬಂಧಕ ಆದೇಶ ಅಥವಾ ವ್ಯವಸ್ಥಾಪನೆಯ ಆದೇಶವನ್ನು ಮಾಡಿದ್ದರೆ

- ಮತ್ತು ಅಂಥ ವ್ಯಕ್ತಿಯು ಈ ಅಧಿನಿಯಮದ 2ನೇ ಪ್ರಕರಣದ (ಇ) ಖಂಡದ ಅರ್ಥ ವ್ಯಾಪ್ತಿಯೊಳಗೆ ರೂಢಿಗತ ಅಪರಾಧಿಯಾಗಿದ್ದರೆ, ಅಂಥ ವ್ಯಕ್ತಿಯು ಸಂಬಂಧಪಟ್ಟ ಆ ನಿರಸಿತ ಅಧಿನಿಯಮಿತಿಯ ಉಪಬಂಧಗಳಿಗೆ, ಅಂಥ ಅಧಿನಿಯಮಿತಿಯು ಈ ಅಧಿನಿಯಮದ ಪ್ರಾರಂಭದ ದಿನಾಂಕದಿಂದ ನಾಲ್ಕು ತಿಂಗಳುಗಳ ಅವಧಿಯವರೆಗೆ ನಿರಸನಗೊಳಿಸಿರದಿದ್ದರೆ ಹೇಗೋ ಹಾಗೆ ಅಥವಾ ಈ ಅಧಿನಿಯಮದ 3ನೇ ಪ್ರಕರಣದ ಅಡಿಯಲ್ಲಿ ಹೊರಡಿಸಲಾದ ಯಾವುದೇ ನಿರ್ದೇಶನದ ಅನುಸಾರವಾಗಿ ಇಟ್ಟಿರುವ ರಿಜಿಸ್ಟರಿನಲ್ಲಿ ಅವನ ಹೆಸರು ಮತ್ತು ಇತರ ವಿವರಗಳನ್ನು ನಮೂದಿಸುವವರೆಗೆ -ಇವುಗಳಲ್ಲಿ ಯಾವುದು ಮುಂಚಿನದೋ ಅಲ್ಲಿಯವರೆಗೆ ಒಳಪಟ್ಟಿರುವುದು ಮುಂದುವರಿಯತಕ್ಕದ್ದು.

**ಅನುಸೂಚಿ- ಎ**

**[2(i)ನೇ ಪ್ರಕರಣವನ್ನು ನೋಡಿ]**

I

**ಭಾರತ ದಂಡ ಸಂಹಿತೆಯ ಅಡಿಯಲ್ಲಿನ ಅಪರಾಧಗಳು**

**ಅಧ್ಯಾಯ - XII**

**ಪ್ರಕರಣ.**

231 ಖೋಟಾ ನಾಣ್ಯ ತಯಾರಿಕೆ

232 ಭಾರತೀಯ ಖೋಟಾ ನಾಣ್ಯ ತಯಾರಿಕೆ

233 ಖೋಟಾ ನಾಣ್ಯ ತಯಾರಿಕೆಯ ಉಪಕರಣವನ್ನು ತಯಾರಿಸುವುದು ಅಥವಾ ಮಾರುವುದು.

234 ಭಾರತೀಯ ಖೋಟಾ ನಾಣ್ಯ ತಯಾರಿಕೆಗಾಗಿ ಉಪಕರಣವನ್ನು ತಯಾರಿಸುವುದು ಅಥವಾ ಮಾರುವುದು.

235 ಖೋಟಾ ನಾಣ್ಯ ತಯಾರಿಕೆಗಾಗಿ ಉಪಯೋಗಿಸುವ ಉದ್ದೇಶದಿಂದ ಉಪಕರಣ ಅಥವಾ ಸಾಮಗ್ರಿಯನ್ನು ಹೊಂದಿರುವುದು.

239 ಖೋಟಾ ನಾಣ್ಯವೆಂದು ಗೊತ್ತಿದ್ದೂ ಸ್ವಾಧೀನದಲ್ಲಿಟ್ಟುಕೊಂಡು ಅದನ್ನು ಕೊಡುವುದು.

240 ಅದು ಖೋಟಾ ನಾಣ್ಯವೆಂದು ಗೊತ್ತಿದ್ದೂ ತಾನು ಸ್ವಾಧಿನವನ್ನು ಹೊಂದಿರುವ ಭಾರತೀಯ ನಾಣ್ಯವನ್ನು ಕೊಡುವುದು.

242 ತಾನು ಸ್ವಾಧೀನ ಹೊಂದಿರುವ ನಾಣ್ಯವು ಖೋಟಾ ನಾಣ್ಯವೆಂದು ಗೊತ್ತಿದ್ದೂ ವ್ಯಕ್ತಿಯು ಸ್ವಾಧೀನ ಹೊಂದಿರುವ ಖೋಟಾ ನಾಣ್ಯ.

243 ತಾನು ಸ್ವಾಧೀನ ಹೊಂದಿರುವ ಭಾರತೀಯ ನಾಣ್ಯವು ಖೋಟಾ ನಾಣ್ಯವಾಗಿದೆ ಎಂದು ಗೊತ್ತಿದ್ದೂ ಅದು ಸ್ವಾಧೀನ ಹೊಂದಿರುವ ಒಬ್ಬ ವ್ಯಕ್ತಿಯ ಖೋಟಾ ನಾಣ್ಯ.

## ಅಧ್ಯಾಯ-XVI

ಪ್ರಕರಣ.

304 ಕೊಲೆಯೆಂದು ಪರಿಗಣಿಸಲಾಗದ ಆಪರಾಧಿಕ ಮಾನವ ಹತ್ಯೆ.

307 ಕೊಲೆಯ ಯತ್ನ.

308 ಆಪರಾಧಿಕ ಮಾನವ ಹತ್ಯೆಯ ಯತ್ನ.

311 ಠಕ್ಕನಾಗಿರುವುದು.

324 ಅಪಾಯಕಾರಿ ಆಯುಧಗಳು ಅಥವಾ ಸಾಧನಗಳ ಮೂಲಕ ಸ್ವಯಿಚ್ಛೆಯಿಂದ ಗಾಯವನ್ನುಂಟು ಮಾಡುವುದು.

325 ಸ್ವಯಿಚ್ಛೆಯಿಂದ ತೀವ್ರ ಗಾಯವನ್ನುಂಟು ಮಾಡುವುದು.

326 ಅಪಾಯಕಾರಿ ಆಯುಧಗಳು ಅಥವಾ ಸಾಧನಗಳ ಮೂಲಕ ಸ್ವ ಇಚ್ಛೆಯಿಂದ ತೀವ್ರ ಗಾಯಗೊಳಿಸುವುದು.

327 ಸ್ವತ್ತನ್ನು ಬಲತ್ಕಾರವಾಗಿ ವಶಪಡಿಸಿಕೊಳ್ಳುವುದು ಅಥವಾ ಕಾನೂನು ಬಾಹಿರ ಕಾರ್ಯವನ್ನು ಮಾಡುವಂತೆ ಒತ್ತಾಯಿಸಲು ಸ್ವ ಇಚ್ಛೆಯಿಂದ ಗಾಯಗೊಳಿಸುವುದು.

328 ಒಂದು ಅಪರಾಧವನ್ನು ಮಾಡುವ ಉದ್ದೇಶದಿಂದ ವಿಷ, ಮುಂತಾದ ಸಾಧನಗಳ ಮೂಲಕ ಗಾಯವನ್ನುಂಟು ಮಾಡುವುದು.

329 ಸ್ವತ್ತನ್ನು ಬಲಾತ್ಕಾರವಾಗಿ ವಶಪಡಿಸಿಕೊಳ್ಳುವುದು ಅಥವಾ ಕಾನೂನು ಬಾಹಿರ ಕೃತ್ಯವನ್ನು ಮಾಡುವಂತೆ ಒತ್ತಾಯಿಸಲು ಸ್ವಯಿಚ್ಛೆಯಿಂದ ತೀವ್ರ ಗಾಯವನ್ನುಂಟು ಮಾಡುವುದು.

332 ಲೋಕ ನೌಕರನು ತನ್ನ ಕರ್ತವ್ಯವನ್ನು ನಿರ್ವಹಿಸದಂತೆ ಬೆದರಿಸಲು ಸ್ವಯಿಚ್ಛೆಯಿಂದ ಗಾಯಗೊಳಿಸುವುದು.

333 ಲೋಕ ನೌಕರನು ಅವನ ಕರ್ತವ್ಯವನ್ನು ನಿರ್ವಹಿಸದಂತೆ ಬೆದರಿಸಲು ಸ್ವಯಿಚ್ಛೆಯಿಂದ ತೀವ್ರ ಗಾಯವನ್ನುಂಟು ಮಾಡುವುದು.

347 ಸ್ವತ್ತನ್ನು ಬಲಾತ್ಕಾರವಾಗಿ ವಶಪಡಿಸಿಕೊಳ್ಳುವುದು ಅಥವಾ ಕಾನೂನು ಬಾಹಿರ ಕೃತ್ಯಗಳನ್ನು ಮಾಡುವಂತೆ ಒತ್ತಾಯಿಸಲು ಅಕ್ರಮವಾಗಿ ಬಂಧನದಲ್ಲಿಡುವುದು.

365 ವ್ಯಕಿಯನ್ನು ಗೌಪ್ಯವಾಗಿ ಮತ್ತು ಅಕ್ರಮವಾಗಿ ಬಂಧನದಲ್ಲಿಡುವ ಉದ್ದೇಶದಿಂದ ಅಪಹರಿಸುವುದು ಅಥವಾ ಕದ್ದೊಯ್ಯುವುದು.

366ಎ. ಅಪ್ರಾಪ್ತ ವಯಸ್ಸಿನ ಹುಡುಗಿಯನ್ನು ದೊರಕಿಸಿ ಕೊಡುವುದು.

366ಬಿ. ವಿದೇಶದಿಂದ ಹುಡುಗಿಯನ್ನು ಆಮದು ಮಾಡಿಕೊಳ್ಳುವುದು.

368 ಅಪಹರಿಸಿದ ಅಥವಾ ಕದ್ದೊಯ್ದ ವ್ಯಕ್ತಿಯನ್ನು ಅಕ್ರಮವಾಗಿ ಬಚ್ಚಿಡುವುದು ಅಥವಾ ಬಂಧನದಲ್ಲಿಡುವುದು.

369 ಹತ್ತು ವರ್ಷದೊಳಗಿನ ಮಗುವನ್ನು ಅದರ ಮೈಮೇಲಿರುವುದನ್ನು ಕಳವು ಮಾಡುವ ಉದ್ದೇಶದಿಂದ ಅಪಹರಿಸುವುದು ಅಥವಾ ಕದ್ದೊಯ್ಯುವದು.

## ಅಧ್ಯಾಯ -XVII

ಪ್ರಕರಣ:

379 ಕಳವು.

380 ವಾಸದ ಮನೆ, ಇತ್ಯಾದಿಗಳಲ್ಲಿ ಕಳವು.

382 ಕಳವು ಮಾಡುವುದಕ್ಕಾಗಿ ಸಾಯಿಸುವ, ಗಾಯಗೊಳಿಸುವ ಅಥವಾ ಅಡ್ಡಿಯುಂಟು ಮಾಡುವುದನ್ನು ತಡೆಯಲು ಪೂರ್ವ ಸಿದ್ಧತೆ ಮಾಡಿಕೊಂಡ ಕಳವು.

384 ಬಲಾತ್ಕಾರವಾಗಿ ವಶಪಡಿಸಿಕೊಳ್ಳುವುದು.

385 ಬಲಾತ್ಕಾರವಾಗಿ ವಶಪಡಿಸಿಕೊಳ್ಳಲು ವ್ಯಕ್ತಿಗೆ ಕ್ಷತಿಯನ್ನುಂಟು ಮಾಡುವುದಾಗಿ ಭಯಪಡಿಸುವುದು.

386 ವ್ಯಕ್ತಿಗೆ ಮರಣ ಅಥವಾ ತೀವ್ರ ಗಾಯದ ಭಯವನ್ನುಂಟು ಮಾಡುವ ಮೂಲಕ ಬಲಾತ್ಕಾರವಾಗಿ ವಶಪಡಿಸಿಕೊಳ್ಳುವುದು.

387 ಬಲಾತ್ಕಾರವಾಗಿ ವಶಪಡಿಸಿಕೊಳ್ಳುವುದಕ್ಕಾಗಿ ವ್ಯಕ್ತಿಗೆ ಮರಣ ಅಥವಾ ತೀವ್ರ ಗಾಯದ ಭಯವನ್ನುಂಟು ಮಾಡುವುದು.

392 ಸುಲಿಗೆ.

393 ಸುಲಿಗೆ ಮಾಡಲು ಪ್ರಯತ್ನ.

394 ಸುಲಿಗೆ ಮಾಡುವಾಗ ಸ್ವಯಿಚ್ಛೆಯಿಂದ ಗಾಯವನ್ನುಂಟು ಮಾಡುವುದು.

395 ದರೋಡೆ.

397 ಮರಣ ಅಥವಾ ತೀವ್ರ ಗಾಯವನ್ನುಂಟು ಮಾಡಲು ಪ್ರಯತ್ನಿಸಿ, ಸುಲಿಗೆ ಅಥವಾ ದರೋಡೆ ಮಾಡುವುದು.

398 ಮಾರಕ ಆಯುಧದಿಂದ ಸಜ್ಜಾಗಿದ್ದುಕೊಂಡು ಸುಲಿಗೆ ಆಥವಾ ದರೋಡೆ ಮಾಡಲು ಪ್ರಯತ್ನಿಸುವುದು.

399 ದರೋಡೆ ಮಾಡಲು ಸಿದ್ಧತೆ ಮಾಡಿಕೊಳ್ಳುವುದು.

400 ದರೋಡೆಕಾರರ ಗುಂಪಿಗೆ ಸೇರಿರುವುದು.

401 ಕಳ್ಳರ ಗುಂಪಿಗೆ ಸೇರಿರುವುದು.

402 ದರೋಡೆ ಮಾಡುವ ಉದ್ದೇಶಕ್ಕಾಗಿ ಸೇರುವುದು.

411 ಕಳವು ಸ್ವತ್ತನ್ನು ಅಪ್ರಮಾಣಿಕವಾಗಿ ಸ್ವೀಕರಿಸುವುದು.

414 ಕಳವು ಸ್ವತ್ತನ್ನು ಬಚ್ಚಿಡಲು ಸಹಾಯ ಮಾಡುವುದು.

451 ಕಾರಾವಾಸದಿಂದ ದಂಡನೀಯವಾದ ಅಪರಾಧವನ್ನು ಮಾಡಲು ಮನೆಯ ಅಕ್ರಮ ಪ್ರವೇಶ.

452 ಗಾಯ, ಹಲ್ಲೆ ಅಥವಾ ಅಕ್ರಮ ಪ್ರತಿಬಂಧಕಕ್ಕಾಗಿ ಸಿದ್ಧತೆ ಮಾಡಿಕೊಂಡ ತರುವಾಯ ಮನೆಯ ಅಕ್ರಮ ಪ್ರವೇಶ.

453 ಹೊಂಚುಹಾಕಿ ಮನೆಯ ಅಕ್ರಮ ಪ್ರವೇಶ ಮಾಡುವುದು ಅಥವಾ ಮನೆಗೆ ಕನ್ನ ಹಾಕುವುದು.

454 ಕಾರಾವಾಸದಿಂದ ದಂಡನೀಯವಾದ ಅಪರಾಧವನ್ನು ಮಾಡಲು ಹೊಂಚು ಹಾಕಿ ಮನೆಯ ಅಕ್ರಮ ಪ್ರವೇಶ ಮಾಡುವುದು ಅಥವಾ ಮನೆಗೆ ಕನ್ನ ಹಾಕುವುದು.

457 ಕಾರಾವಾಸದಿಂದ ದಂಡನೀಯವಾದ ಅಪರಾಧ ಮಾಡಲು ರಾತ್ರಿಯಲ್ಲಿ ಹೊಂಚು ಹಾಕಿ ಮನೆಯ ಅಕ್ರಮ ಪ್ರವೇಶ ಮಾಡುವುದು ಅಥವಾ ಮನೆಗೆ ಕನ್ನ ಹಾಕುವುದು.

458 ಗಾಯ, ಹಲ್ಲೆ ಅಥವಾ ಅಕ್ರಮ ಪ್ರತಿಬಂಧಕ್ಕಾಗಿ ಸಿದ್ಧತೆಯನ್ನು ಮಾಡಿಕೊಂಡ ತರುವಾಯ ರಾತ್ರಿಯಲ್ಲಿ ಹೊಂಚು ಹಾಕಿ ಮನೆಯ ಅಕ್ರಮ ಪ್ರವೇಶ ಮಾಡುವುದು ಅಥವಾ ಮನೆಗೆ ಕನ್ನ ಹಾಕುವುದು.

459 ಹೊಂಚು ಹಾಕಿ ಮನೆಯ ಅಕ್ರಮ ಪ್ರವೇಶ ಮಾಡುವಾಗ ಅಥವಾ ಮನೆಗೆ ಕನ್ನ ಹಾಕುವಾಗ ಉಂಟು ಮಾಡಿದ ತೀವ್ರ ಗಾಯ.

460 ರಾತ್ರಿಯಲ್ಲಿ ಹೊಂಚು ಹಾಕಿ ಮನೆಯ ಅಕ್ರಮ ಪ್ರವೇಶ ಮಾಡುವುದಕ್ಕೆ ಅಥವಾ ಮನೆಗೆ ಕನ್ನ ಹಾಕುವುದಕ್ಕೆ ಸಂಬಂಧಿಸಿದಂತೆ ಎಲ್ಲಾ ವ್ಯಕ್ತಿಗಳ ಪೈಕಿ ಒಬ್ಬನು ಮರಣ ಅಥವಾ ತೀವ್ರ ಗಾಯವನ್ನುಂಟು ಮಾಡಿರುವಲ್ಲಿ ಅವರೆಲ್ಲರೂ ಜಂಟಿಯಾಗಿ ದಂಡನೀಯರು.

II

**ಸ್ತ್ರೀಯರ ಮತ್ತು ಬಾಲಕಿಯರ ಅನೈತಿಕ ವ್ಯವಹಾರ ಧಮನ ಅಧಿನಿಯಮ, 1956 (1956ರ ಕೇಂದ್ರಾಧಿನಿಯಮ 104) ರ ಅಡಿಯಲ್ಲಿನ ಅಪರಾಧ.**

**ಪ್ರಕರಣ :**

4. ವೇಶ್ಯಾವೃತ್ತಿಯ ಗಳಿಕೆಗಳಿಂದ ಜೀವನ.

III

**ಪಾನ ನಿಷೇಧ ಅಧಿನಿಯಮಗಳ ಅಡಿಯಲ್ಲಿನ ಅಪರಾಧಗಳು.**

| | ಪ್ರಕರಣ |
|---|---|
| [1][ಮಂಗಳೂರು ಮತ್ತು ಕೊಳ್ಳೇಗಾಲ][1] ಪ್ರದೇಶದಲ್ಲಿ ಜಾರಿಯಲ್ಲಿರುವಂಥ ಮದರಾಸು ಪಾನ ನಿಷೇಧ ಅಧಿನಿಯಮ, 1937 (1937ರ ಮದರಾಸು ಅಧಿನಿಯಮ X)ರ | 4(1) (ಎಫ್) ಅಥವಾ (ಜಿ) |
| ಮೈಸೂರು ಮತ್ತು [1][ಗುಲ್ಬರ್ಗಾ ಪ್ರದೇಶಗಳಲ್ಲಿ ][1] ಜಾರಿಯಲ್ಲಿರುವಂತೆ ಮೈಸೂರು ಪಾನ ನಿಷೇಧ ಅಧಿನಿಯಮ, 1948 (1948ರ ಮೈಸೂರು ಅಧಿನಿಯಮ XXXVII) ರ | 4(1) (ಎಫ್) ಅಥವಾ (ಜಿ) |
| [1][ಬೆಳಗಾಂ ಪ್ರದೇಶ][1] ದಲ್ಲಿ ಜಾರಿಯಲ್ಲಿರುವಂಥ ಮುಂಬಯಿ ಪಾನ ನಿಷೇಧ ಅಧಿನಿಯಮ, 1949 (1949ರ ಮುಂಬಯಿ ಅಧಿನಿಯಮ XXV)ರ | 12 (ಸಿ) ಮತ್ತು 13 (ಸಿ). |
| ಕೊಡಗು ಜಿಲ್ಲೆಯಲ್ಲಿ ಜಾರಿಯಲ್ಲಿರುವಂಥ ಕೊಡಗು ಪಾನ ನಿಷೇಧ ಅಧಿನಿಯಮ, 1956 (1956ರ ಕೊಡಗು ಅಧಿನಿಯಮ 1)ರ | 4(1) (ಎಫ್) ಅಥವಾ (ಜಿ). |

1. ಕರ್ನಾಟಕ ಕಾನೂನುಗಳ ಅಳವಡಿಕೆ ಆದೇಶ, 1973ರ ಮೂಲಕ 1.11.1973ರಿಂದ ಜಾರಿಗೆ ಬರುವಂತೆ ಅಳವಡಿಸಲಾಗಿದೆ.

**ಅನುಸೂಚಿ 'ಬಿ'**
**(22ನೇ ಪ್ರಕರಣವನ್ನು ನೋಡಿ)**
**ನಿರಸನಗೊಳಿಸಿದ ಅಧಿನಿಯಮಿತಿಗಳು.**

1. ಮೈಸೂರು ರೂಢಿಗತ ಅಪರಾಧಿಗಳ ನಿರ್ಬಂಧ ಅಧಿನಿಯಮ, 1952 (1952ರ ಮೈಸೂರು ಅಧಿನಿಯಮ XXIII).
2. ಮದರಾಸು ರೂಢಿಗತ ಅಪರಾಧಿಗಳ ನಿರ್ಬಂಧ ಅಧಿನಿಯಮ, 1948 (1948ರ ಮದರಾಸು ಅಧಿನಿಯಮ VI ).
3. ಮುಂಬಯಿ ರೂಢಿಗತ ಅಪರಾಧಿಗಳ ನಿರ್ಬಂಧ ಅಧಿನಿಯಮ, 1947. (1947ರ ಮುಂಬಯಿ ಅಧಿನಿಯಮ LI ).
4. ಹೈದರಾಬಾದ್ ರೂಢಿಗತ ಅಪರಾಧಿಗಳ (ನಿರ್ಬಂಧ ಮತ್ತು ವ್ಯವಸ್ಥಾಪನೆ) ಅಧಿನಿಯಮ, 1954 (1954ರ ಹೈದರಾಬಾದ್ ಅಧಿನಿಯಮ XXII ).

**ಅಧಿಸೂಚನೆ**

**ಬೆಂಗಳೂರು, ದಿನಾಂಕ 30ನೇ ಜೂನ್, 1969 [ಸಂಖ್ಯೆ:ಎಚ್‌ಡಿ:5ಪಿಆರ್‌ಎಚ್:62]**

**ಎಸ್. ಒ. 1404.-** ಮೈಸೂರು ರೂಢಿಗತ ಅಪರಾಧಿಗಳ ಅಧಿನಿಯಮ, 1961 ರ (1961ರ ಮೈಸೂರು ಅಧಿನಿಯಮ ಸಂಖ್ಯೆ 24) 1 ನೇ ಪ್ರಕರಣದ (3)ನೇ ಉಪ ಪ್ರಕರಣದ ಮೂಲಕ ಪ್ರದತ್ತವಾದ ಅಧಿಕಾರಗಳನ್ನು ಚಲಾಯಿಸಿ, ಮೈಸೂರು ಸರ್ಕಾರವು, 1969ರ ಜುಲೈ 17ನೇ ದಿನಾಂಕವನ್ನು ಸದರಿ ಅಧಿನಿಯಮವು ಜಾರಿಗೆ ಬರತಕ್ಕ ದಿನಾಂಕವೆಂದು ಈ ಮೂಲಕ ಗೊತ್ತುಪಡಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
(ಎನ್.ಕೆ. ಶ್ರೀನಿವಾಸ ಮೂರ್ತಿ)
ಸರ್ಕಾರದ ಅಧೀನ ಕಾರ್ಯದರ್ಶಿ,
ಗೃಹ ಇಲಾಖೆ.

(ರಾಜ್ಯ ಪತ್ರದ ಭಾಗ IV- 2 ಸಿ (ii) ರಲ್ಲಿ ಪುಟ 3460ರಲ್ಲಿ ಪ್ರಕಟಿಸಲಾಗಿದೆ.)

# ಕರ್ನಾಟಕ ರೂಢಿಗತ ಅಪರಾಧಿಗಳ ನಿಯಮಗಳು, 1969

## ನಿಯಮಗಳ ಅನುಕ್ರಮಣಿಕೆ

## ಅಧ್ಯಾಯ-I

## ಪ್ರಾರಂಭಿಕ

ನಿಯಮ:



## ಅಧ್ಯಾಯ- II

## ರೂಢಿಗತ ಅಪರಾಧಿಗಳ ನೋಂದಣಿ ಮತ್ತು ಅವರ ಚಲನವಲನಗಳ ಮೇಲೆ ನಿರ್ಬಂಧ

## ಅಧ್ಯಾಯ -III

## ರೂಢಿಗತ ಅಪರಾಧಿಗಳ ಸುಧಾರಕ ತರಬೇತಿ

19. ಸುಧಾರಕ ವ್ಯವಸ್ಥಾಪನಾ ಕೇಂದ್ರಗಳ ವ್ಯವಸ್ಥಾಪನೆ, ನಿಯಂತ್ರಣ ಮತ್ತು ಮೇಲ್ವಿಚಾರಣೆ
20. ವ್ಯವಸ್ಥಾಪನಾ ಕೇಂದ್ರಗಳ ಮೇಲ್ವಿಚಾರಣೆ
21. ಸುಧಾರಕ ವ್ಯವಸ್ಥಾಪನಾ ಕೇಂದ್ರಗಳಿಗೆ ಭೇಟಿ
22. ಸುಧಾರಕ ವ್ಯವಸ್ಥಾಪನಾ ಕೇಂದಗಳಲ್ಲಿ ಪ್ರತ್ಯೇಕ ವಿಭಾಗಗಳ ಏರ್ಪಾಡು
23. ವ್ಯವಸ್ಥಾಪನೆಗೊಳಗಾದವರಿಗೆ ಉದ್ಯೋಗ ಒದಗಿಸುವುದು
24. ವ್ಯವಸ್ಥಾಪನೆಗೊಳಗಾದವರಿಗೆ ಜೀವನೋಪಾಯ
25. ವ್ಯವಸ್ಥಾಪನೆಗೊಳಗಾದವರಿಗೆ ಶಿಕ್ಷ ಅವಧಿಯ ಉದ್ಯೋಗ ಮತ್ತು ಸಹಾಯ ಧನದ ಸಂದಾಯ
26. ವ್ಯವಸ್ಥಾಪನೆಗೊಳಗಾದವನ ಗಳಿಕೆಗಳು
27. ವ್ಯವಸ್ಥಾಪನೆಗೊಳಗಾದವರಿಗೆ ಉಡುಪುಗಳ ಸರಬರಾಜು
28. ವ್ಯವಸ್ಥಾನೆಗೊಳಗಾದವನು ಅಪ್ಪಣೆ ಚೀಟಿ ಇಲ್ಲದೆ ಪರಿಮಿತಿಗಳನ್ನು ಬಿಡಬಾರದು
29. ವ್ಯವಸ್ಥಾಪನೆಗೊಳಗಾದವನು ಸೂಚಿಸುವುದು
30. ವ್ಯವಸ್ಥಾಪನೆಗೊಳಗಾದವನನ್ನು ಹಾಜರಿ ಕೂಗುವುದು
31. ವ್ಯವಸ್ಥಾಪನೆಗೊಳಗಾದವನ ಶೋಧನೆ
32. ವ್ಯವಸ್ಥಾಪನೆಗೊಳಗಾದವನ ಸಾಕು ಪ್ರಾಣಿಗಳು
33. ವ್ಯವಸ್ಥಾಪನೆಗೊಳಗಾದವನ ಕರ್ತವ್ಯಗಳು
34. 33ನೇ ನಿಯಮದ ಉಲ್ಲಂಘನೆಗೆ ಸಂಬಂಧಿಸಿದಂತೆ ದಂಡ
35. ಅಧೀಕ್ಷಕನಿಂದ ದಂಡ ವಸೂಲಿ
36. ವ್ಯವಸ್ಥಾಪನೆಗೊಳಗಾದವನ ಬಳಿ ಕಂಡು ಬಂದ ಮಾದಕ ವಸ್ತುಗಳನ್ನು ಜಪ್ತಿಮಾಡುವುದು
37. ರೂಢಿಗತ ಅಪರಾಧಿಯ ಬಂಧನ
38. ಒಂದು ಸುಧಾರಕ ವ್ಯವಸ್ಥಾಪನಾ ಕೇಂದ್ರದಿಂದ ಇನ್ನೊಂದಕ್ಕೆ ವ್ಯಕ್ತಿಗಳ ವರ್ಗಾವಣೆ
39. ಲೈಸೆನ್ಸ್ ನ ಮೇಲೆ ವ್ಯವಸ್ಥಾಪನೆಗೊಳಗಾದವನ ಬಿಡುಗಡೆ
40. ಲೈಸೆನ್ಸ್ ಮೇಲೆ ಬಿಡುಗಡೆಯಾದ ವ್ಯಕ್ತಿಯು ಪಾಲಿಸಬೇಕಾದ ಷರತ್ತುಗಳು
41. ಸುಧಾರಣ ಅಧಿಕಾರಿಯು ಚಲಾಯಿಸಬಹುದಾದ ಅಥವಾ ಆತನು ಪ್ರತ್ಯಾಯೋಜಿಸಬಹುದಾದ ಅಧಿಕಾರಗಳು
42. ಅಧೀಕ್ಷಕನ ಅಧಿಕಾರಗಳು

## ಅಧ್ಯಾಯ-IV

### ಸಂದರ್ಶಕ ಸಮಿತಿಗಳು

43. ಸಂದರ್ಶಕ ಸಮಿತಿಯ ರಚನೆ

44. ಸಂದರ್ಶಕ ಸಮಿತಿಯ ಸದಸ್ಯರ ಕರ್ತವ್ಯಗಳು

45. ಸಂದರ್ಶಕ ಸಮಿತಿಯ ನಡವಳಿಗಳು

46. ಚಲನವಲನಗಳನ್ನು ನಿರ್ಬಂಧಿಸಲಾಗಿರುವ ಎಲ್ಲ ವ್ಯಕ್ತಿಗಳ ಪ್ರಕರಣಗಳ ಪುನರೀಕ್ಷಣೆ

## ಅಧ್ಯಾಯ -V

### ಪ್ರಮಾಣಿತ ಸಂಸ್ಥೆಗಳನ್ನು ಸುಧಾರಕ ವ್ಯವಸ್ಥಾಪನಾ ಕೇಂದ್ರಗಳನ್ನಾಗಿ ಅನುಮೋದಿಸುವುದು ಹಾಗೂ ಅವುಗಳ ನಿರ್ವಹಣೆ ಮತ್ತು ನಿಯಂತ್ರಣ

47. ಸುಧಾರಕ ವ್ಯವಸ್ಥಾಪನಾ ಕೇಂದ್ರ ಆಗಿ ಪ್ರಮಾಣೀಕರಿಸಲು ಕಾರ್ಯ ವಿಧಾನ

48. ಪ್ರಮಾಣಿತ ಸುಧಾರಕ ವ್ಯವಸ್ಥಾಪನಾ ಕೇಂದ್ರವು ಆಡಳಿತ ಮಂಡಳಿಯನ್ನು ಹೊಂದಿರುವುದು

49. ಸುಧಾರಣ ಅಧಿಕಾರಿಯ ಕರ್ತವ್ಯಗಳು

50. ಸುಧಾರಕ ವ್ಯವಸ್ಥಾಪನಾ ಕೇಂದ್ರದ ಪ್ರಭಾರ ಹೊಂದಿರುವ ಅಧೀಕ್ಷಕನ ಕರ್ತವ್ಯಗಳು ಮತ್ತು ಹೊಣೆಗಾರಿಕೆಗಳು

51. ಪ್ರಮಾಣಿತ ಸುಧಾರಕ ವ್ಯವಸ್ಥಾಪನಾ ಕೇಂದ್ರದ ನಿಯಂತ್ರಣ

52. ಪ್ರಮಾಣಿತ ಸುಧಾರಕ ವ್ಯವಸ್ಥಾಪನಾ ಕೇಂದ್ರದಲ್ಲಿ ಪ್ರತ್ಯೇಕ ವಿಭಾಗ

53. ಪ್ರಮಾಣಿತ ಸುಧಾರಕ ವ್ಯವಸ್ಥಾಪನಾ ಕೇಂದ್ರಗಳಿಗೆ ಸಂದರ್ಶಕ ಸಮಿತಿ

54. ದಂಡಗಳು

55. ನಿರಸನ ಮತ್ತು ಉಳಿಸುವಿಕೆಗಳು.

ನಮೂನೆ ಎ ಯಿಂದ ನಮೂನೆ ಎಚ್ ವರೆಗೆ

ಅಧಿಸೂಚನೆ

ಬೆಂಗಳೂರು, ದಿನಾಂಕ 30ನೇ ಜೂನ್ 1959

**ಜಿಎಸ್‌ಆರ್ 245.–** ಕರ್ನಾಟಕ ರೂಢಿಗತ ಅಪರಾಧಿಗಳ ಅಧಿನಿಯಮ 1961ರ (1961ರ ಮೈಸೂರು ಅಧಿನಿಯಮ 24) 21ನೇ ಪ್ರಕರಣದಿಂದ ಪ್ರದತ್ತವಾದ ಅಧಿಕಾರಗಳನ್ನು ಚಲಾಯಿಸಿ, ಕರ್ನಾಟಕ ಸರ್ಕಾರವು, ಈ ಮುಂದಿನ ನಿಯಮಗಳನ್ನು ಈ ಮೂಲಕ ರಚಿಸುತ್ತದೆ. ಅದರ ಕರಡನ್ನು 1968ನೇ ಜನವರಿ 18ನೇ ದಿನಾಂಕದ ಕರ್ನಾಟಕ ರಾಜ್ಯ ಪತ್ರದ ಭಾಗ -IV 2 ಸಿ (i)ನೇ ಪ್ರಕರಣದಲ್ಲಿ, ಅಧಿಸೂಚನೆ ಕ್ರಮಾಂಕ ಜಿಎಸ್‌ಆರ್ 13 (ಎಚ್‌ಡಿ 5 ಪಿಆರ್‌ಎಚ್ 61) ದಿನಾಂಕ 18ನೇ ಜನವರಿ 1968 ಇದರಲ್ಲಿ ಪ್ರಕಟಿಸಲಾಗಿದೆ, ಎಂದರೆ:-

## ಕರ್ನಾಟಕ ರೂಢಿಗತ ಅಪರಾಧಿಗಳ ನಿಯಮಗಳು, 1969

### ಅಧ್ಯಾಯ -I

### ಪ್ರಾರಂಭಿಕ

**1. ಶೀರ್ಷಿಕೆ.–** (1) ಈ ನಿಯಮಗಳನ್ನು ಕರ್ನಾಟಕ ರೂಢಿಗತ ಅಪರಾಧಿಗಳ ನಿಯಮಗಳು, 1969 ಎಂದು ಕರೆಯತಕ್ಕದ್ದು.

**2. ಪರಿಭಾಷೆಗಳು.–** ಈ ನಿಯಮಗಳಲ್ಲಿ, ಸಂದರ್ಭವು ಅನ್ಯಥಾ ಅಗತ್ಯಪಡಿಸಿದ ಹೊರತು:-

(ಎ) "ಅಧಿನಿಯಮ" ಎಂದರೆ, ಕರ್ನಾಟಕ ರೂಢಿಗತ ಅಪರಾಧಿಗಳ ಅಧಿನಿಯಮ, 1961 (1961ರ ಕರ್ನಾಟಕ ಅಧಿನಿಯಮ 24);

(ಬಿ) "ನಮೂನೆ" ಎಂದರೆ, ಈ ನಿಯಮಗಳಿಗೆ ಅನುಬಂಧಿಸಲಾದ ನಮೂನೆ ;

(ಸಿ) "ಸರ್ಕಾರ" ಎಂದರೆ, ರಾಜ್ಯ ಸರ್ಕಾರ;

(ಡಿ) "ಚಲನ ವಲನಗಳನ್ನು ನಿರ್ಬಂಧಿಸುವ ಆದೇಶ " ಎಂದರೆ, 11ನೇ ಪ್ರಕರಣದ ಅಡಿಯಲ್ಲಿ ಆದೇಶ;

(ಇ) "ಸುಧಾರಣಾಧಿಕಾರಿ" ಎಂದರೆ, ವ್ಯವಸ್ಥಾಪನೆಗಾಗಿ ಹಾಗೆಂದು ನೇಮಕ ಮಾಡಲಾದ ಅಧಿಕಾರಿ;

(ಎಫ್) "ನಿರ್ಬಂಧಿತ ವ್ಯಕ್ತಿ" ಎಂದರೆ, ಯಾರ ಸಂಬಂಧದಲ್ಲಿ ನಿರ್ಬಂಧಿತ ಆದೇಶವನ್ನು ಜಾರಿ ಮಾಡಲಾಗಿದೆಯೋ ಆ ಒಬ್ಬ ವ್ಯಕ್ತಿ;

(ಜಿ) "ಪ್ರಕರಣ" ಎಂದರೆ, ಅಧಿನಿಯಮದ ಒಂದು ಪ್ರಕರಣ;

(ಎಚ್) "ವ್ಯವಸ್ಥಾಪನೆಗೊಳಗಾದವನು" ಎಂದರೆ, ಸರ್ಕಾರ ಅಥವಾ ನ್ಯಾಯಾಲಯ ಅಥವಾ ಜಿಲ್ಲಾ ನ್ಯಾಯಾಧೀಶನು 14ನೇ ಪ್ರಕರಣದ ಅಡಿಯಲ್ಲಿ ಒಂದು ಸುಧಾರಕ ಸ್ವರೂಪದ ತರಬೇತಿಯನ್ನು ಪಡೆಯುವಂತೆ ಆದೇಶಿಸಲಾದ ಮತ್ತು ಒಂದು ಸುಧಾರಕ ವ್ಯವಸ್ಥಾಪನಾ ಕೇಂದ್ರದಲ್ಲಿ ಇರಿಸಲಾದ ಒಬ್ಬ ವ್ಯಕ್ತಿ.

### ಅಧ್ಯಾಯ- II

### ರೂಢಿಗತ ಅಪರಾಧಿಗಳ ನೋಂದಣಿ ಮತ್ತು ಅವರ ಚಲನವಲನಗಳ ಮೇಲೆ ನಿರ್ಬಂಧ

**3. ರೂಢಿಗತ ಅಪರಾಧಿಗಳ ರಿಜಿಸ್ಟರು.–** (1) 3ನೇ ಪ್ರಕರಣದ ಉದ್ದೇಶಕ್ಕಾಗಿ, ರೂಢಿಗತ ಅಪರಾಧಿಗಳ ಒಂದು ರಿಜಿಸ್ಟರನ್ನು ನಮೂನೆ "ಎ"ಯಲ್ಲಿ ಇಟ್ಟುಕೊಂಡು ಬರತಕ್ಕದ್ದು. ಆ ರಿಜಿಸ್ಟರು, ಬಿಡಿ ಹಾಳೆಯ ಪುಸ್ತಕದಲ್ಲಿ ಇರತಕ್ಕದ್ದು. ಪ್ರತಿಯೊಬ್ಬ ರೂಢಿಗತ ಅಪರಾಧಿಗಾಗಿ ಒಂದು ಪ್ರತ್ಯೇಕ ಹಾಳೆ ಇರತಕ್ಕದ್ದು.

(2) ಒಂದು ಜಿಲ್ಲೆಯ ಪ್ರತಿಯೊಬ್ಬ ನೋಂದಾಯಿತ ಅಪರಾಧಿಗೆ, ಒಂದು ಕ್ರಮಸಂಖ್ಯೆಯನ್ನು ಗೊತ್ತುಪಡಿಸತಕ್ಕದ್ದು. ಜಿಲ್ಲೆಯ ಹೆಸರನ್ನು ತೋರಿಸುವ ಸಲುವಾಗಿ ಸಂಬಂಧಪಟ್ಟ ಜಿಲ್ಲೆಯ ಹೆಸರಿಗೆ ಅವಕಾಶ ಕಲ್ಪಿಸಿರಬೇಕು.

**4. ರೂಢಿಗತ ಅಪರಾಧಿಗಳಿಗೆ ನೋಟೀಸು ಜಾರಿ ಮಾಡುವುದು.–** (1) 4ನೇ ಪ್ರಕರಣದ ಅಡಿಯಲ್ಲಿನ ನೋಟೀಸು ನಮೂನೆ 'ಬಿ'ಯಲ್ಲಿರತಕ್ಕದ್ದು.

(2) ನೋಟೀಸನ್ನು ಕಾರ್ಯ ಸಾಧ್ಯವಾದರೆ, ನೋಟೀಸಿನ ದ್ವಿಪ್ರತಿಯಲ್ಲಿ ಒಂದನ್ನು ರೂಢಿಗತ ಅಪರಾಧಿಗೆ ತಲುಪಿಸುವ ಅಥವಾ ನೀಡುವ ಮೂಲಕ ಅವನಿಗೆ ಖುದ್ದಾಗಿ ಜಾರಿ ಮಾಡತಕ್ಕದ್ದು.

(3) ಹಾಗೆ ಒಂದು ನೋಟೀಸು ಜಾರಿಮಾಡಲಾಗಿರುವ ಇನ್ನೊಂದರ ಹಿಂದೆ ಪ್ರತಿಯೊಬ್ಬ ರೂಢಿಗತ ಅಪರಾಧಿಯು, ಅದನ್ನು ಸ್ವೀಕರಿಸಿದ್ದಕ್ಕಾಗಿ ಇನ್ನೊಂದು ದ್ವಿಪ್ರತಿಗಳಲ್ಲಿ ಒಂದು ಸಹಿ ಮಾಡತಕ್ಕದ್ದೆಂದು ಜಾರಿಗೊಳಿಸುವ ಅಧಿಕಾರಿಯು ಅಗತ್ಯಪಡಿಸಿದರೆ, ಹಾಗೆ ಮಾಡತಕ್ಕದ್ದು.

(4) ಯುಕ್ತ ಎಚ್ಚರಿಕೆ ವಹಿಸಿಯೂ ಸಂಬಂಧಪಟ್ಟ ರೂಢಿಗತ ಅಪರಾಧಿಯನ್ನು ಕಂಡು ಹಿಡಿಯಲಾಗದಿದ್ದಲ್ಲಿ ದ್ವಿಪ್ರತಿಗಳಲ್ಲಿ ಒಂದನ್ನು ಅವನಿಗಾಗಿ ಅವನ ಕುಟುಂಬದ ಯಾರಾದರೂ ವಯಸ್ಕ ಸದಸ್ಯನಿಗೆ ನೀಡುವ ಮೂಲಕ ಒಂದು ನೋಟೀಸು ಜಾರಿ ಮಾಡಬಹುದು ಮತ್ತು ಜಾರಿಗೊಳಿಸುವ ಅಧಿಕಾರಿಯು ಅಗತ್ಯಪಡಿಸಿದರೆ, ಹಾಗೆ ನೋಟೀಸು ಪಡೆದ ವ್ಯಕ್ತಿಯು ಹಾಗೆ ಸ್ವೀಕರಿಸಿದ್ದಕ್ಕಾಗಿ ಇನ್ನೊಂದು ದ್ವಿಪ್ರತಿಯ ಹಿಂದೆ ರುಜು ಮಾಡತಕ್ಕದ್ದು.

(5) ಯುಕ್ತ ಎಚ್ಚರಿಕೆ ವಹಿಸಿಯೂ (1) ರಿಂದ (4)ರ ವರೆಗಿನ ಉಪ ನಿಯಮಗಳಲ್ಲಿ ನಮೂದಿಸಿರುವ ರೀತಿಯಲ್ಲಿ ನೋಟೀಸು ಜಾರಿ ಮಾಡಲಾಗದಿದ್ದರೆ, ಜಾರಿಗೊಳಿಸುವ ಅಧಿಕಾರಿಯು, ನೋಟೀಸಿನ ದ್ವಿಪ್ರತಿಗಳಲ್ಲಿ ಒಂದನ್ನು ಸಮನುಮಾಡಲಾದ ರೂಢಿಗತ ಅಪರಾಧಿಯು ಸಾಮಾನ್ಯವಾಗಿ ವಾಸಿಸುವ ಮನೆಯ ಅಥವಾ ತೋಟದ ಮನೆಯ ಎದ್ದು ಕಾಣಿಸುವ ಜಾಗದಲ್ಲಿ ಅಂಟಿಸತಕ್ಕದ್ದು.

**5. ರೂಢಿಗತ ಅಪರಾಧಿಯು ಕಾರಾಗೃಹದಲ್ಲಿರುವಾಗ ಕಾರ್ಯ ವಿಧಾನ.-** (1) 4ನೇ ನಿಯಮದ (1)ನೇ ಉಪ ನಿಯಮದಲ್ಲಿ ಉಲ್ಲೇಖಿಸಲಾದ ನೋಟೀಸನ್ನು ಯಾರ ಮೇಲೆ ಜಾರಿಗೊಳಿಸಲಾಗಿದೆಯೋ ಆ ರೂಢಿಗತ ಅಪರಾಧಿಯು, ಜೈಲಿನಲ್ಲಿದ್ದಾಗ, ಕಾರಾಗೃಹದ ಅಧೀಕ್ಷಕನು ನೋಟೀಸಿನಲ್ಲಿ ನಿರ್ದಿಷ್ಟಪಡಿಸಲಾದ ಪ್ರಾಧಿಕಾರದ ಮುಂದೆ ಅಂಥ ರೂಢಿಗತ ಅಪರಾಧಿಯನ್ನು ಹಾಜರುಪಡಿಸಲು ವ್ಯವಸ್ಥೆ ಮಾಡತಕ್ಕದ್ದು.

(2) (1)ನೇ ಉಪ ನಿಯಮದಲ್ಲಿ ಉಲ್ಲೇಖಿಸಲಾದ ನೋಟೀಸನ್ನು ಯಾರ ಮೇಲೆ ಜಾರಿ ಮಾಡಲಾಗಿದೆಯೋ ಆ ರೂಢಿಗತ ಅಪರಾಧಿಯು, ರಿಜಿಸ್ಟರಿನಲ್ಲಿ ನಮೂದುಗಳನ್ನು ಏಕೆ ಮಾಡಕೂಡದೆಂಬುದಕ್ಕೆ ಕಾರಣವನ್ನು ನೋಟೀಸಿನಲ್ಲಿ ನಿರ್ದಿಷ್ಟಪಡಿಸಲಾದ ಅವಧಿಯೊಳಗೆ ತೋರಿಸಲು ತಪ್ಪಿದಲ್ಲಿ, ರಿಜಿಸ್ಟರಿನಲ್ಲಿ ನಮೂದುಗಳನ್ನು ಮಾಡಲು ಅವನ ಯಾವ ಆಕ್ಷೇಪಣೆಯು ಇಲ್ಲವೆಂದು ಪೂರ್ವಭಾವನೆ ಮಾಡತಕ್ಕದ್ದು.

**6. ನೋಂದಾಯಿತ ಅಪರಾಧಿಯು ನಿವಾಸದ ಬದಲಾವಣೆಯನ್ನು ಸೂಚಿಸುವುದು.-** ಪ್ರತಿಯೊಬ್ಬ ನೋಂದಾಯಿತ ಅಪರಾಧಿಯು, ತನ್ನ ಸಾಮಾನ್ಯ ನಿವಾಸದ ಯಾವುದೇ ಬದಲಾವಣೆಯನ್ನು ಅಥವಾ ಉದ್ದೇಶಿತ ಯಾವ ಪೊಲೀಸ್ ಠಾಣೆಯ ಪ್ರಭಾವಿ ಅಧಿಕಾರಿಯ ಅಧಿಕಾರ ವ್ಯಾಪ್ತಿಯಲ್ಲಿ ತಾನು ವಾಸಿಸುತ್ತಿರುವನೋ ಅವನಿಗೆ ಮತ್ತು ಅವನು ಗ್ರಾಮದಲ್ಲಿ ವಾಸವಾಗಿದ್ದರೆ, ಗ್ರಾಮದ ಪೊಲೀಸ್ ಪಟೇಲನಿಗೆ ಸಹ ಖುದ್ದಾಗಿ ವರದಿ ಮಾಡುವ ಮೂಲಕ ಸೂಚಿಸತಕ್ಕದ್ದು. ಅಂಥ ವರದಿಯನ್ನು ಮಾಡುವಾಗ, ಅವನು ತನ್ನ ಉದ್ದೇಶಿತ ಹೊಸ ನಿವಾಸದ ವಿಳಾಸವನ್ನು ಮತ್ತು ಅಂಥ ನಿವಾಸಕ್ಕೆ ಅವನು ಹೋಗುವ ದಿನಾಂಕವನ್ನು ತಿಳಿಸತಕ್ಕದ್ದು.

**7. ಚಲನವಲನಗಳ ಮೇಲೆ ನಿರ್ಬಂಧ ಇರುವ ನೋಂದಾಯಿತ ಅಪರಾಧಿಯು ಪಾಲಿಸಬೇಕಾದ ನಿರ್ಬಂಧಗಳ ಸ್ವರೂಪ.-** (1) ಯಾರ ಸಂಬಂಧದಲ್ಲಿ ಚಲನವಲನಗಳನ್ನು ನಿರ್ಬಂಧಿಸುವ ಒಂದು ಆದೇಶವನ್ನು ಮಾಡಲಾಗಿದೆಯೋ ಪ್ರತಿಯೊಬ್ಬ ನೋಂದಾಯಿತ ಅಪರಾಧಿಯು, ಸದರಿ ಆದೇಶದಲ್ಲಿ ಅನ್ಯಥಾ ನಿರ್ದೇಶಿಸಿದ ಹೊರತು, ಅವನು ತಾನು ವಾಸಿಸುತ್ತಿರುವ ಗ್ರಾಮದ ಪೊಲೀಸ್ ಪಟೇಲನ ಮುಂದೆ ಅಥವಾ ಯಾವ ಪೊಲೀಸ್ ಠಾಣೆಯ ಪ್ರಭಾ ಅಧಿಕಾರಿಯ ಅಧಿಕಾರ ವ್ಯಾಪ್ತಿಯಲ್ಲಿ ತಾನು ವಾಸಿಸುತ್ತಿರುವನೋ ಅವನ ಮುಂದೆ ಖುದ್ದಾಗಿ ಸಂಜೆ 7 ರಿಂದ 9.00 ರ ವರೆಗಿನ ನಡುವಿನ ಅವಧಿಯಲ್ಲಿ ಮುಂದಿನಂತೆ ಹಾಜರಾಗತಕ್ಕದ್ದು,-

(i) ಆದೇಶದ ದಿನಾಂಕದಿಂದ ಪ್ರಾರಂಭವಾಗಿ ಮೊದಲ ಆರು ತಿಂಗಳಲ್ಲಿ - ಪ್ರತಿ ದಿನ;

(ii) ನಂತರದ ಆರು ತಿಂಗಳಿಗೆ - ನಾಲ್ಕು ದಿನಗಳಿಗಿಂತ ಹೆಚ್ಚಲ್ಲದ ಅಂತರದಲ್ಲಿ ; ಮತ್ತು

(iii) ಉಳಿದ ಅವಧಿಗೆ -10 ದಿನಗಳಿಗಿಂತ ಹೆಚ್ಚಲ್ಲದ ಅಂತರದಲ್ಲಿ:

ಪರಂತು, ಮೇಲೆ ನಮೂದಿಸಲಾದ ಯಾವುವೇ ಅವಧಿಗಳಲ್ಲಿ, ಅಂಥ ಅಪರಾಧಿಯು:-

(ಎ) ಯಾವುದೇ ಜಾಮೀನು ರಹಿತ ಅಪರಾಧದ ಸಂಬಂಧದಲ್ಲಿ ಅಪರಾಧಿಯೆಂದು ನಿರ್ಣೀತನಾದರೆ; ಅಥವಾ

(ಬಿ) ಜಾಮೀನು ರಹಿತ ಅಪರಾಧ ಮಾಡಿರುವ ಬಗ್ಗೆ ಸಂಬಂಧಪಟ್ಟ ಜಿಲ್ಲಾ ಮ್ಯಾಜಿಸ್ಟ್ರೇಟರು ಲಿಖಿತದಲ್ಲಿ ಕಾರಣಗಳನ್ನು ದಾಖಲು ಮಾಡಿ ಸೂಕ್ತವಾಗಿ ಶಂಕಿಸಿದರೆ,

ಅವನು, (ಎ) ಖಂಡದಲ್ಲಿ ನಮೂದಿಸಿದ ಪ್ರಕರಣದಲ್ಲಿ ಶಿಕ್ಷೆಯು ಮುಗಿಯುವ ದಿನಾಂಕದಿಂದ ಮತ್ತು (ಬಿ) ಖಂಡದಲ್ಲಿ ನಮೂದಿಸಿದ ಪ್ರಕರಣದಲ್ಲಿ ಜಿಲ್ಲಾ ಮ್ಯಾಜಿಸ್ಟ್ರೇಟರು ನಿರ್ದೇಶಿಸಬಹುದಾದಂಥ ದಿನಾಂಕದಿಂದ ಪ್ರಾರಂಭವಾಗಿ, (i), (ii) ಮತ್ತು (iii)ನೇ ಖಂಡಗಳಲ್ಲಿ ನಿರ್ದಿಷ್ಟಪಡಿಸಲಾದ ರೀತಿಯಲ್ಲಿ ಆ ಖಂಡಗಳಲ್ಲಿ ನಮೂದಿಸಿದ ಪೂರ್ಣ ಅವಧಿಯವರೆಗೆ ಖುದ್ದಾಗಿ ಹಾಜರಾಗತಕ್ಕದ್ದು.

(2) ಅಂಥ ಅಪರಾಧಿಯು ಮಹಿಳೆಯಾಗಿದ್ದರೆ, ಅವಳು ಇಚ್ಛಿಸಿದಲ್ಲಿ, ಅವಶ್ಯಕ ಹಾಜರಿಯನ್ನು ಯಾರೇ ಪುರುಷ ಸಂಬಂಧಿಯ ಮೂಲಕ ಮಾಡಿಸಬಹುದು. ಆದರೂ, ಅಂಥ ಹಾಜರಾತಿಯು ನಿಜವಲ್ಲವೆಂದು ರುಜುವಾತಾದರೆ, ತಾನು ಬದ್ಧವಾಗಬಹುದಾದ ಯಾವುದೇ ದಂಡದಿಂದ ಅವಳನ್ನು ವಿನಾಯಿತಿಗೊಳಿಸತಕ್ಕದ್ದಲ್ಲ.

**8. 10ನೇ ಪ್ರಕರಣದ ಅಡಿಯಲ್ಲಿ ರಾಜ್ಯ ಸರ್ಕಾರಕ್ಕೆ ಮನವಿ ಸಲ್ಲಿಸಬೇಕಾದ ಅವಧಿ.–** (1) 10ನೇ ಪ್ರಕರಣದ ಅಡಿಯಲ್ಲಿ ರಾಜ್ಯಸರ್ಕಾರಕ್ಕೆ ಮನವಿ ಸಲ್ಲಿಸುವ ಅವಧಿಯು, ನೋಂದಣಿಯ ಅಥವಾ ಮರುನೋಂದಣಿಯ ಆದೇಶದ ಅಥವಾ 7ನೇ ಪ್ರಕರಣದ (2)ನೇ ಉಪ ಪ್ರಕರಣದ ಅಡಿಯಲ್ಲಿ ಹೊರಡಿಸಲಾದ ಆದೇಶದ ಸ್ವೀಕೃತಿಯ ದಿನಾಂಕದಿಂದ ಮೂವತ್ತು ದಿನಗಳು ಆಗಿರತಕ್ಕದ್ದು.

(2) ಮನವಿ ಸ್ವೀಕರಿಸಿದ ನಂತರ, ಸರ್ಕಾರವು ವಿಚಾರಣೆಯ ದಿನಾಂಕವನ್ನು ಗೊತ್ತುಪಡಿಸತಕ್ಕದ್ದು ಮತ್ತು ವಿಚಾರಣೆಯ ದಿನಾಂಕವನ್ನು ಬಾಧಿತ ವ್ಯಕ್ತಿಗೆ ತಿಳಿಸತಕ್ಕದ್ದು, ಅವನು ಸದರಿ ದಿನಾಂಕದಂದು ಖುದ್ದಾಗಿ ಅಥವಾ ಒಬ್ಬ ನ್ಯಾಯವಾದಿಯ ಮೂಲಕ ಹಾಜರಾಗತಕ್ಕದ್ದು.

**9. 11ನೇ ಪ್ರಕರಣದ ಅಡಿಯಲ್ಲಿ ಮಾಡಲಾದ ಆದೇಶದ ಜಾರಿ.–** 11ನೇ ಪ್ರಕರಣದ (1)ನೇ ಉಪಪ್ರಕರಣದ ಅಡಿಯಲ್ಲಿ ಮಾಡಲಾದ ಆದೇಶದ ಒಂದು ಪ್ರತಿಯನ್ನು 4ನೇ ನಿಯಮದಲ್ಲಿ ನಿರ್ದಿಷ್ಟಪಡಿಸಲಾದ ರೀತಿಯಲ್ಲಿ ನೋಂದಾಯಿತ ಅಪರಾಧಿಗೆ ಜಾರಿ ಮಾಡತಕ್ಕದ್ದು.

**10. ನೋಂದಾಯಿತ ಅಪರಾಧಿಯ ಗೈರು ಹಾಜರಿ.–** (1) ಯಾರ ಸಂಬಂಧದಲ್ಲಿ ಚಲನವಲನಕ್ಕೆ ಸಂಬಂಧಿಸಿದಂತೆ ಒಂದು ನಿರ್ಬಂಧಕ ಆದೇಶವನ್ನು ಮಾಡಲಾಗಿದೆಯೋ ಆ ಯಾರೇ ನೋಂದಾಯಿತ ಅಪರಾಧಿಯು, ಒಂದು ಅಥವಾ ಹೆಚ್ಚು ರಾತ್ರಿಗಳಲ್ಲಿ ಅವನ ನಿವಾಸದಿಂದ ಗೈರು ಹಾಜರಾಗಲು ಉದ್ದೇಶಿಸಿದರೆ, ಅವನು ತನ್ನ ಉದ್ದೇಶಿತ ಗೈರು ಹಾಜರಿಯನ್ನು,-

(ಎ) ಅವನು ಒಂದು ಗ್ರಾಮದಲ್ಲಿ ವಾಸಿಸುತ್ತಿದ್ದರೆ:-

(i) ಉದ್ದೇಶಿತ ಗೈರು ಹಾಜರಿ ಅವಧಿಯು ಏಳು ದಿನಗಳಿಗೆ ಮೀರದಿದ್ದಾಗ, ಗ್ರಾಮದ ಪೊಲೀಸ್ ಪಟೇಲನಿಗೆ;

(ii) ಉದ್ದೇಶಿತ ಗೈರು ಹಾಜರಿಯ ಅವಧಿಯು ಏಳು ದಿವಸಗಳನ್ನು ಮೀರಿದರೆ, ಗ್ರಾಮದ ಪೊಲೀಸ್ ಪಟೇಲನಿಗೆ ಮತ್ತು ಸಂಬಂಧಪಟ್ಟ ಪೊಲೀಸ್ ಠಾಣೆಯ ಪ್ರಭಾರೀ ಅಧಿಕಾರಿಗೆ;

(ಬಿ) ಅವನು, ಗ್ರಾಮವಲ್ಲದ ಇತರ ಸ್ಥಳದಲ್ಲಿ ವಾಸಿಸುತ್ತಿದ್ದರೆ, ತಾನು ವಾಸವಾಗಿರುವ ಸ್ಥಳದ ಅಧಿಕಾರ ವ್ಯಾಪ್ತಿ ಹೊಂದಿರುವ ಪೋಲೀಸ್ ಠಾಣೆಯ ಪ್ರಭಾರೀ ಅಧಿಕಾರಿಗೆ ಸೂಚಿಸತಕ್ಕದ್ದು.

(2) ಅಂಥ ನೋಂದಾಯಿತ ಅಪರಾಧಿಯು, ರಾತ್ರಿಯಲ್ಲಿ ಅವನು ತಂಗುವ ಪ್ರತಿಯೊಂದು ಸ್ಥಳದಲ್ಲಿ, ಗ್ರಾಮ ಪೊಲೀಸ್ ಪಟೇಲನಿಗೆ ಅಥವಾ ಪಟ್ಟಣ ಅಥವಾ ನಗರವಾದರೆ ಸಂಬಂಧಪಟ್ಟ ಪೊಲೀಸ್ ಠಾಣೆಗೆ, ಅವನು ಆ ಸ್ಥಳಕ್ಕೆ ಬರುವುದನ್ನು ಮತ್ತು ಆ ಸ್ಥಳದಿಂದ ಹೊರಡುವುದನ್ನು ಹಾಗೂ ಅವನು ತೆರಳಲು ಉದ್ದೇಶಿಸಿದ ಸ್ಥಳ ಹಾಗೂ ರಾತ್ರಿಯ ತಂಗುವಿಕೆಯನ್ನು ಸೂಚಿಸತಕ್ಕದ್ದು.

(3) ಅವನ ಗಮ್ಯ ಸ್ಥಾನಕ್ಕೆ ಬಂದ ನಂತರ, ಅಂಥ ಅಪರಾಧಿಯು, ಗ್ರಾಮ ಪೊಲೀಸ್ ಪಟೇಲನಿಗೆ ಅಥವಾ ಪಟ್ಟಣ ಅಥವಾ ನಗರವಾದರೆ ಸಂಬಂಧಪಟ್ಟ ಪೊಲೀಸ್ ಠಾಣೆಯ ಪ್ರಭಾರೀ ಅಧಿಕಾರಿಯ ಮುಂದೆ ಹಾಜರಾಗತಕ್ಕದ್ದು.

(4) ಅಂಥ ಅಪರಾಧಿಯ ತಾತ್ಕಾಲಿಕ ಗೈರು ಹಾಜರಿಯನ್ನು ದಾಖಲು ಮಾಡಲು, ನಮೂನೆ-'ಸಿ' ಯಲ್ಲಿನ ಒಂದು ತಾತ್ಕಾಲಿಕ ಗೈರು ಹಾಜರಿ ನಮೂನೆಯನ್ನು ಬಳಸತಕ್ಕದ್ದು. ನೋಂದಾಯಿತ ಅಪರಾಧಿಯು ಗ್ರಾಮದಲ್ಲಿ ವಾಸವಿದ್ದಾಗ ಮತ್ತು ಅವಧಿಯು ಏಳು ದಿವಸಗಳಿಗೆ ಮೀರದಿದ್ದಾಗ ಗ್ರಾಮ ಪೊಲೀಸ್ ಪಟೇಲನು, ಈ ನಮೂನೆಯನ್ನು ಬಳಸಬಹುದು ಮತ್ತು ಇತರ ಸಂದರ್ಭಗಳಲ್ಲಿ ಸಂಬಂಧಪಟ್ಟ ಪೊಲೀಸ್ ಠಾಣೆಯ ಪ್ರಭಾರೀ ಅಧಿಕಾರಿಯು ಈ ನಮೂನೆಯನ್ನು ನೀಡತಕ್ಕದ್ದು.

**11. ನೋಂದಾಯಿತ ಅಪರಾಧಿಯು ಹಾಜರಾಗಲು ತಪ್ಪುವದು.–** ಯಾರ ಸಂಬಂಧದಲ್ಲಿ ಚಲನವಲನಗಳ ಮೇಲೆ ಒಂದು ನಿರ್ಬಂಧಕ ಆದೇಶವನ್ನು ಹೊರಡಿಸಲಾಗಿದೆಯೋ ಆ ನೋಂದಾಯಿತ ಅಪರಾಧಿಯು, 7ನೇ ನಿಯಮದಲ್ಲಿ ವಿಧಿಸಲಾದಂತೆ ಹಾಜರಾಗಲು ತಪ್ಪಿದಲ್ಲಿ, ಅಂಥ ಅಪರಾಧಿಯು ಒಂದು ಗ್ರಾಮದಲ್ಲಿ ವಾಸವಾಗಿದ್ದರೆ / ಗ್ರಾಮದ ಪೊಲೀಸ್ ಪಟೇಲನು ಅಥವಾ ಇತರ ಸಂದರ್ಭಗಳಲ್ಲಿ, ಅಂಥ ಅಪರಾಧಿಯು ವಾಸವಾಗಿರುವ ಸ್ಥಳದ ಅಧಿಕಾರ ವ್ಯಾಪ್ತಿ ಹೊಂದಿರುವ ಪೊಲೀಸ್ ಠಾಣೆಯ ಪ್ರಭಾರೀ ಅಧಿಕಾರಿಯು ನೋಂದಾಯಿತ ಅಪರಾಧಿಯು ಅವನ ವಾಸದ ಸ್ಥಳದಲ್ಲಿ ಇರುವನೇ ಎಂಬುದನ್ನು ತಪಾಸಣೆ ಮಾಡಲು ಹಗಲಿನಲ್ಲಿ ಅಥವಾ ರಾತ್ರಿಯಲ್ಲಿ ಅವನ ವಾಸಸ್ಥಳಕ್ಕೆ ಭೇಟಿ ನೀಡಲು ಸಕ್ಷಮನಾಗಿರತಕ್ಕದ್ದು. ಅಂಥ ಅಪರಾಧಿಯು ಅಲ್ಲಿ ಇದ್ದರೆ, ಪೊಲೀಸ್ ಪಟೇಲ ಅಥವಾ ಸಂದರ್ಭಾನುಸಾರ ಅಂಥ ಅಧಿಕಾರಿಯ ಮುಂದೆ ಖುದ್ದಾಗಿ ಹಾಜರಾಗುವುದು ಅಥವಾ ದೈಹಿಕವಾಗಿ ಅಸಮರ್ಥನಾಗಿದ್ದರೆ ಪೊಲೀಸ್ ಪಟೇಲ ಅಥವಾ ಇತರ ಅಧಿಕಾರಿಗೆ ಇರುವಿಕೆಯ ಬಗ್ಗೆ ಅನ್ಯಥಾ ಮನವರಿಕೆ ಮಾಡಿಕೊಡುವುದು ಅಂಥ ಅಪರಾಧಿಯ ಕರ್ತವ್ಯವಾಗಿರತಕ್ಕದ್ದು.

**12. ಚಲನವಲನಗಳನ್ನು ನಿರ್ಬಂಧಿಸಲಾದಂಥ ಪ್ರದೇಶದ ಪರಿಮಿತಿಗಳಿಂದ ಗೈರುಹಾಜರಾಗಲು ಅಪ್ಪಣೆ ಚೀಟಿ.–** ಯಾರ ಚಲನವಲನಗಳ ಮೇಲೆ ಒಂದು ನಿರ್ಬಂಧಕ ಆದೇಶವನ್ನು ಮಾಡಲಾಗಿದೆಯೋ ಆ ನೋಂದಾಯಿತ ಅಪರಾಧಿಯು, 13ನೇ ನಿಯಮದಲ್ಲಿ ಇರುವ ರೀತಿಯಲ್ಲಿ ನಮೂನೆ 'ಡಿ' ಯಲ್ಲಿ ಒಂದು ಅಪ್ಪಣೆ ಚೀಟಿಯನ್ನು ಪಡೆಯದೆ, ಅವನ ಚಲನವಲನಗಳನ್ನು ನಿರ್ಬಂಧಿಸಲಾದ ಪ್ರದೇಶಗಳ ಪರಿಮಿತಿಯನ್ನು ಬಿಡತಕ್ಕದ್ದಲ್ಲ ಅಥವಾ ಅಲ್ಲಿಂದ ಗೈರು ಹಾಜರಾಗತಕ್ಕದ್ದಲ್ಲ:

ಪರಂತು, ನಿರ್ಬಂಧಿತ ಪ್ರದೇಶವು, ಪೊಲೀಸ ಠಾಣೆ ಇರುವ ಪ್ರದೇಶಕ್ಕಿಂತ ಚಿಕ್ಕದಾಗಿದ್ದಲ್ಲಿ, ಒಬ್ಬ ನಿರ್ಬಂಧಿತ ವ್ಯಕ್ತಿಯು ವಾಸವಾಗಿರುವ ಪರಿಮಿತಿಗಳೊಳಗಿರುವ ಪೋಲೀಸ್ ಠಾಣೆಗೆ ಅಥವಾ ನ್ಯಾಯಾಲಯದ ಯಾವುದೇ ಪ್ರಕ್ರಿಯೆಯ ಅನುಪಾಲನೆಯಲ್ಲಿ ಯಾವುದೇ ನ್ಯಾಯಾಲಯದ ಮುಂದೆ ಅಥವಾ ಅವನನ್ನು ಅಥವಾ ಅವನ ಕುಟುಂಬವನ್ನು ಬಾಧಿಸುವ ಒಂದು ಅಪರಾಧದ ಸಂಬಂಧದಲ್ಲಿ ದೂರು ನೀಡಲು ಅಧಿಕಾರ ವ್ಯಾಪ್ತಿ ಹೊಂದಿರುವ ಯಾವುದೇ ನ್ಯಾಯಾಲಯದ ಮುಂದೆ ಅಥವಾ ಈ ನಿಯಮಗಳ ಅಡಿಯಲ್ಲಿ ಒಂದು ಅಪ್ಪಣೆ ಚೀಟಿಗಾಗಿ ಅರ್ಜಿ ಸಲ್ಲಿಸಲು ಹಾಜರಾಗುವ ಉದ್ದೇಶಕ್ಕಾಗಿ ಅವನು ಆ ಪ್ರದೇಶದ ಪರಿಮಿತಿಗಳಿಂದ ಹೊರಬರುವುದನ್ನು ನಿರ್ಬಂಧಿತ ವ್ಯಕ್ತಿಗೆ, ಈ ನಿಯಮದಲ್ಲಿ ಇರುವುದು ಯಾವುದೂ ಕಾನೂನು ಬಾಹಿರವೆಂದು ಭಾವಿಸತಕ್ಕದ್ದಲ್ಲ:

ಮತ್ತೂ ಪರಂತು, ಅಂಥ ವ್ಯಕ್ತಿಯು, ಆ ಪ್ರದೇಶವನ್ನು ಬಿಡುವ ಮೊದಲು ಪೊಲೀಸ್ ಪಟೇಲನಿಗೆ ಅಥವಾ ಪೊಲೀಸ್ ಠಾಣೆಯ ಪ್ರಭಾರಿ ಅಧಿಕಾರಿಗೆ ತಿಳಿಸತಕ್ಕದ್ದು ಮತ್ತು ಸಂದರ್ಭಾನುಸಾರ ನೇರವಾಗಿ ಪೊಲೀಸ್ ಠಾಣೆಗೆ ಅಥವಾ ನ್ಯಾಯಾಲಯಕ್ಕೆ ತೆರಳತಕ್ಕದ್ದು.

**13. ಅಪ್ಪಣೆ ಚೀಟಿಯನ್ನು ನೀಡುವುದಕ್ಕೆ ಸಂಬಂಧಪಟ್ಟ ಕಾರ್ಯ ವಿಧಾನ.-** (1) ನಿರ್ಬಂಧಿತ ವ್ಯಕ್ತಿಯು ವಾಸವಾಗಿರುವ ಗ್ರಾಮದ ಪೊಲೀಸ್ ಪಟೇಲನು, ಅಂಥ ವ್ಯಕ್ತಿಗೆ, ಅವನ ಚಲನವಲನವನ್ನು ನಿರ್ಬಂಧಿಸಿರುವ ಪ್ರದೇಶವನ್ನು ಸೂರ್ಯೋದಯದಿಂದ ಸೂರ್ಯಾಸ್ತದವರೆಗಿನ ಒಂದು ದಿನಕ್ಕಾಗಿ ಬಿಡುವಂತೆ ಪ್ರಾಧಿಕರಿಸಿ, ನಮೂನೆ 'ಎಫ್' ನಲ್ಲಿ ಒಂದು ಅಪ್ಪಣೆ ಚೀಟಿಯನ್ನು ನೀಡತಕ್ಕದ್ದು.

(2) ಯಾರ ಅಧಿಕಾರ ವ್ಯಾಪ್ತಿಯಲ್ಲಿ ನಿರ್ಬಂಧಿಸಲಾದ ವ್ಯಕ್ತಿಯು ವಾಸವಾಗಿರುವನೋ ಆ ಪೊಲೀಸ್ ಠಾಣೆಯ ಪ್ರಭಾರಿ ಅಧಿಕಾರಿಯು, ನಿರ್ಬಂಧಿತ ವ್ಯಕ್ತಿಯು ಸರಿಯಾದ ಕಾರಣವನ್ನು ತೋರಿಸಿದ ನಂತರ, ಹದಿನೈದು ದಿವಸಗಳಿಗಿಂತ ಹೆಚ್ಚಲ್ಲದಂತೆ ಗೈರು ಹಾಜರಿಗೆ ಅನುಮತಿ ನೀಡಬಹುದು ಮತ್ತು ಅಪ್ಪಣೆ ಚೀಟಿಯನ್ನು ನೀಡಬಹುದು.

(3) ಇತರ ಸ್ಥಳಗಳಲ್ಲಿ, ಪೊಲೀಸ್ ಅಧೀಕ್ಷನು ಒಬ್ಬ ನಿರ್ಬಂಧಿತ ವ್ಯಕ್ತಿಗೆ ಹದಿನೈದು ದಿವಸಗಳಿಗಿಂತ ಹೆಚ್ಚಿನ ಯಾವುದೇ ಅವಧಿಗೆ ಗೈರು ಹಾಜರಿಗೆ ಅನುಮತಿನೀಡಬಹುದು ಮತ್ತು ಅಪ್ಪಣೆ ಚೀಟಿಯನ್ನು ನೀಡಬಹುದು.

(4) ಈ ನಿಯಮದ ಅಡಿಯಲ್ಲಿ ನೀಡಲಾಗುವ ಯಾವುದೇ ಅಪ್ಪಣೆ ಚೀಟಿಯು ತ್ರಿಪ್ರತಿಯಲ್ಲಿ ಇರತಕ್ಕದ್ದು ಮತ್ತು ಪ್ರತಿಯೊಂದು ಅಪ್ಪಣೆ ಚೀಟಿಗೂ ಗೈರು ಹಾಜರಿಗೆ ಅನುಮತಿ ನೀಡುವ ಅಧಿಕಾರಿಯಿಂದ ಸಹಿ ಹಾಕಿರತಕ್ಕದ್ದು. ಒಂದು ಭಾಗವನ್ನು ಅಂಥ ಅಧಿಕಾರಿಯು ಇಟ್ಟುಕೊಳ್ಳತಕ್ಕದ್ದು. ಎರಡನೇ ಭಾಗವನ್ನು ಗೈರು ಹಾಜರಿಗೆ ಅನುಮತಿ ನೀಡಲಾಗಿರುವ ನಿರ್ಬಂಧಿತ ವ್ಯಕ್ತಿಗೆ ಕೊಡತಕ್ಕದ್ದು ಮತ್ತು ಮೂರನೆಯದನ್ನು ಅಪ್ಪಣೆ ಚೀಟಿ ಹೊಂದಿರುವವನ ಗಮ್ಯ ಸ್ಥಾನದ ಪರಿಮಿತಿಯಲ್ಲಿರುವ ಪೊಲೀಸು ಠಾಣೆಯ ಪ್ರಭಾರೀ ಅಧಿಕಾರಿಗೆ ಕಳುಹಿಸತಕ್ಕದ್ದು.

**14. ಅಪ್ಪಣೆ ಚೀಟಿಯಲ್ಲಿ ತಿಳಿಸಿರುವ ಪ್ರಯಾಣದ ರೀತಿ.-** (1) 13ನೇ ನಿಯಮದ ಮೇರೆಗೆ ಗೈರುಹಾಜರಿಗೆ ಅನುಮತಿಯನ್ನು ಪಡೆದ ನಿರ್ಬಂಧಿತ ವ್ಯಕ್ತಿಯು, ಪಾಸಿನಲ್ಲಿ ನಿರ್ದಿಷ್ಟಪಡಿಸಿದ ಮಾರ್ಗದ ಮೂಲಕ ಅವನು ಹೋಗಬೇಕಾದ ಸ್ಥಳಕ್ಕೆ ಪ್ರಯಾಣಿಸಿ ಮತ್ತೆ ಅವನ ವಾಸ ಸ್ಥಳಕ್ಕೆ ಹಿಂದಿರುಗತಕ್ಕದ್ದು. ಪ್ರಯಾಣಿಸಿದ ಸ್ಥಳದ ಗ್ರಾಮದ ಪೊಲೀಸ್ ಪಟೇಲನು ಅಥವಾ ಅವನು ಪಟ್ಟಣ ಅಥವಾ ನಗರಕ್ಕೆ ನಿರ್ಬಂಧಿತನಾಗಿದ್ದರೆ, ಸಂಬಂಧಪಟ್ಟ ಪೊಲೀಸ್ ಠಾಣೆಯ ಪ್ರಭಾರ ಅಧಿಕಾರಿಯಿಂದ ಅಪ್ಪಣೆ ಚೀಟಿಯ ಮೇಲೆ ಸ್ಥಳಕ್ಕೆ ಬಂದ ವೇಳೆ ಮತ್ತು ದಿನಾಂಕವನ್ನು ಹಿಂಬರಹ ಮಾಡಿಸಿ ಇಟ್ಟುಕೊಂಡಿರತಕ್ಕದ್ದು.

(2) ಅಂಥ ವ್ಯಕ್ತಿಯು ಅನುಮತಿ ಪಡೆದಿರುವ ಅವಧಿಯಲ್ಲಿ, ಅವನು ಪ್ರತಿದಿನ ಸಂಜೆ ಗ್ರಾಮದ ಪೊಲೀಸ್ ಪಟೇಲನ ಬಳಿ ಅಥವಾ ಅಧಿಕಾರ ವ್ಯಾಪ್ತಿ ಹೊಂದಿರುವ ಆ ಪೊಲೀಸ್ ಠಾಣೆಯ ಪ್ರಭಾರ ಅಧಿಕಾರಿಯ ಬಳಿ ಹಾಜರಾಗತಕ್ಕದ್ದು ಮತ್ತು ದೂರದ ಸ್ಥಳದಲ್ಲಿದ್ದರೆ, ಅವನು, ಸ್ವತ: ಪೊಲೀಸ್ ಠಾಣೆಯ ಪ್ರಭಾರ ಅಧಿಕಾರಿಯ ಬಳಿ ಹಾಜರಾಗತಕ್ಕದ್ದು ಮತ್ತು ಹಿಂಬರಹಕ್ಕಾಗಿ ತನ್ನ ಅಪ್ಪಣೆ ಚೀಟಿಯನ್ನು ಹಾಜರುಪಡಿಸತಕ್ಕದ್ದು. ಅಂಥ ವ್ಯಕ್ತಿಯು ಅನುಮತಿಸಲಾದ ಅವಧಿಗೂ ಮೀರಿ ಹೆಚ್ಚಾಗಿ ಇರತಕ್ಕದ್ದಲ್ಲ.

(3) ಅವನ ಸ್ವಂತ ಸ್ಥಳದಲ್ಲಿ ವಾಸವಾಗಿರುವ ಅವಧಿಯಲ್ಲಿ ಅಂಥ ವ್ಯಕ್ತಿಯು, ಸೂರ್ಯಾಸ್ತದಿಂದ ಸೂರ್ಯೋದಯದವರೆಗೆ ಅಥವಾ ಹಗಲು ಹೊತ್ತಿನಲ್ಲಿ ಅವನ ನಿವಾಸದಿಂದ ಐದು ಮೈಲುಗಳ ಪರಿಮಿತಿಗಿಂತ ಆಚೆ ಗೈರು ಹಾಜರಾಗಿರತಕ್ಕದ್ದಲ್ಲ.

(4) ಅಂಥ ವ್ಯಕ್ತಿಯು, ತನ್ನ ವಾಸಸ್ಥಳಕ್ಕೆ ಹಿಂದಿರುಗುವ ಮೊದಲು, ಪೊಲೀಸ್ ಪಟೇಲ ಅಥವಾ ಸಂಬಂಧಪಟ್ಟ ಪೊಲೀಸ್ ಠಾಣೆಯ ಪ್ರಭಾರ ಅಧಿಕಾರಿಯವರು ಅಪ್ಪಣೆ ಚೀಟಿಯ ಮೇಲೆ ಮಾಡಿದ ಹೊರಡುವ ವೇಳೆ ಮತ್ತು ದಿನಾಂಕದ ಹಿಂಬರಹವನ್ನು ಹೊಂದಿರತಕ್ಕದ್ದು ಮತ್ತು ಅವನು ತನ್ನ ವಾಸ ಸ್ಥಳಕ್ಕೆ ಹಿಂದಿರುಗಿದ ನಂತರ, ಪಾಸನ್ನು ತಾನು ಪಡೆದ ಪೊಲೀಸ್ ಠಾಣೆಯ ಪ್ರಭಾರ ಅಧಿಕಾರಿ ಅಥವಾ ಗ್ರಾಮ ಪಟೇಲನಿಗೆ ಹಿಂದಿರುಗಿಸತಕ್ಕದ್ದು. ಅಂಥ ಅಪ್ಪಣೆ ಚೀಟಿಯನ್ನು ಮೂಲತ: ಪೊಲೀಸ್ ಸೂಪರಿಂಟೆಂಡೆಂಟರು ನೀಡಿದ್ದರೆ, ಅದನ್ನು ಪೊಲೀಸ್ ಠಾಣೆಯ ಪ್ರಭಾರ ಅಧಿಕಾರಿಯು ಅವರಿಗೆ ಕಳುಹಿಸತಕ್ಕದ್ದು.

**15. ಅಪ್ಪಣೆ ಚೀಟಿಯ ಅವಧಿ.-** 13ನೇ ನಿಯಮದ ಮೇರೆಗೆ ನೀಡಿದ ಅಪ್ಪಣೆ ಚೀಟಿಯನ್ನು ಅದನ್ನು ಮಂಜೂರು ಮಾಡಿದ ಪ್ರಾಧಿಕಾರವು ಯಾವುದೇ ಸಮಯದಲ್ಲಿ ಹಿಂತೆಗೆದುಕೊಳ್ಳಬಹುದು ಹಾಗೂ ಅದರಿಂದಾಗಿ ನೀಡಲಾದ ಅನುಮತಿಯು ರದ್ದಾಗತಕ್ಕದ್ದು.

**16. ವಿನಾಯಿತಿಗಳು.-** (1)ಯಾರೇ ನಿರ್ಬಂಧಿತ ವ್ಯಕ್ತಿಗೆ, ಜಿಲ್ಲಾ ಮ್ಯಾಜಿಸ್ಟ್ರೇಟರು, ಅಂತಹ ವ್ಯಕ್ತಿಯಲ್ಲಿ, ವಿಚಾರಣೆಯ ನಂತರ ಗಣನೀಯ ಸುಧಾರಣೆ ಕಂಡು ಬಂದಿದೆಯೆಂದು ಮತ್ತು ತಪ್ಪು ಗ್ರಾಹ್ಯವಾಗಿರದ ಒಳ್ಳೆಯ ನಡತೆ ಹೊಂದಿರುವನೆಂದು ಮತ್ತು ತನ್ನ

ಜೀವನೋಪಾಯವನ್ನು ನಡೆಸಲು ಸಾಮರ್ಥ್ಯ ಹೊಂದಿರುವನೆಂದು ಹಾಗೂ ಒಂದು ಜಾಮೀನು ರಹಿತ ಅಪರಾಧವನ್ನು ಮಾಡುವುದಿಲ್ಲವೆಂದು ಸಕಾರಣವಾಗಿ ಅಭಿಪ್ರಾಯಪಟ್ಟರೆ, ಅವನಿಗೆ ಮಧ್ಯೆ ಮಧ್ಯೆ ಪುನಃ ಪುನಃ ಹಾಜರಾಗುವುದರಿಂದ ಮತ್ತು ಗೈರು ಹಾಜರಿಗೆ ಅನುಮತಿ ಕೋರಿ ಅಪ್ಪಣೆ ಚೀಟಿ ಪಡೆಯುವುದರಿಂದ ವಿನಾಯಿತಿ ನೀಡಬಹುದು. ಅಂಥ ವಿನಾಯಿತಿಯನ್ನು ಪೊಲೀಸ್ ಅಧೀಕ್ಷಕನಿಗೆ ಅವರಿಗೆ ತಿಳಿಸಿರತಕ್ಕದ್ದು.

(2) ವಿನಾಯಿತಿ ನೀಡುವ ಉದ್ದೇಶಕ್ಕಾಗಿ, ಜಿಲ್ಲಾ ಮ್ಯಾಜಿಸ್ಟ್ರೇಟರು, ನಿರ್ಬಂಧದ ಆದೇಶದ ದಿನಾಂಕದಿಂದ ಒಂದು ವರ್ಷದ ಅವಧಿಯು ಮುಗಿದ ಕೂಡಲೇ ಮತ್ತು ಆ ತರುವಾಯ, ಪ್ರತಿ ಆರು ತಿಂಗಳಿಗೊಮ್ಮೆ ಪ್ರತಿಯೊಬ್ಬ ನಿರ್ಬಂಧಿತ ವ್ಯಕ್ತಿಯ ಪ್ರಕರಣವನ್ನು ಪುನರವಲೋಕನ ಮಾಡತಕ್ಕದ್ದು.

**17. ನೋಂದಾಯಿತ ಅಪರಾಧಿಗಳಿಗೆ ಗುರುತಿನ ಪ್ರಮಾಣ ಪತ್ರ ನೀಡಿಕೆ ಮತ್ತು ಅಂಥ ಪ್ರಮಾಣಪತ್ರಗಳ ಪರಿಶೀಲನೆ.-** (1) ಪ್ರತಿಯೊಬ್ಬ ನೋಂದಾಯಿತ ಅಪರಾಧಿಗೆ ಪೊಲೀಸ್ ಸೂಪರಿಂಟೆಂಡೆಂಟರು 'ಇ' ನಮೂನೆಯಲ್ಲಿ ಗುರುತಿನ ಪ್ರಮಾಣ ಪತ್ರವನ್ನು ನೀಡತಕ್ಕದ್ದು.

(2) (1)ನೇ ಉಪನಿಯಮದ ಮೇರೆಗೆ ನೀಡಲಾದ ಗುರುತಿನ ಪ್ರಮಾಣಪತ್ರವನ್ನು, ನೋಂದಾಯಿತ ಅಪರಾಧಿಯು, ತಪಾಸಣೆ ಉದ್ದೇಶಕ್ಕಾಗಿ ಯಾರೇ ಪೊಲೀಸ್ ಅಧಿಕಾರಿ ಅಥವಾ ಮ್ಯಾಜಿಸ್ಟ್ರೇಟರು ಕೇಳಿದಾಗ ಹಾಜರುಪಡಿಸತಕ್ಕದ್ದು.

**18. ಖಾಯಂ ಪಾಸ್ ನೀಡಿಕೆ.–** ಪೊಲೀಸ್ ಸೂಪರಿಂಟೆಂಡೆಂಟರು, ಚಲನವಲನ ನಿರ್ಬಂಧಕ ಆದೇಶವನ್ನು ಹೊರಡಿಸಿರುವ ವ್ಯಕ್ತಿಯು, ನಿಯೋಜಿಸಿದ ಯಾರೇ ವ್ಯಕ್ತಿಯು ಖರೀದಿಗಳನ್ನು ಅಥವಾ ಮಾರಾಟಗಳನ್ನು ಮಾಡಲು, ಅವನ ಚಲನವಲನಗಳನ್ನು ನಿರ್ಬಂಧಿಸಿದ ಪ್ರದೇಶದ ಹೊರಗಿನ ಹತ್ತಿರದ ಪೇಟೆಗೆ ಅಥವಾ ಮಾರುಕಟ್ಟೆ ಸ್ಥಳಕ್ಕೆ ಭೇಟಿ ನೀಡಬಹುದಾದ ದಿನಗಳನ್ನು ಮತ್ತು ಗೃಹವನ್ನು ನಿರ್ದಿಷ್ಟಪಡಿಸಿ ಬದಲಿ ವ್ಯವಸ್ಥೆಯಾಗಿ ನಮೂನೆ 'ಎಫ್' ನಲ್ಲಿ ಒಂದು ಖಾಯಂ ಪಾಸನ್ನು ನೀಡಬಹುದು.

## ಅಧ್ಯಾಯ -III

## ರೂಢಿಗತ ಅಪರಾಧಿಗಳ ಸುಧಾರಕ ತರಬೇತಿ

**19. ಸುಧಾರಕ ವ್ಯವಸ್ಥಾಪನಾ ಕೇಂದ್ರಗಳ ವ್ಯವಸ್ಥಾಪನೆ, ನಿಯಂತ್ರಣ ಮತ್ತು ಮೇಲ್ವಿಚಾರಣೆ.–** ಎಲ್ಲಾ ಸುಧಾರಕ ವ್ಯವಸ್ಥಾಪನಾ ಕೇಂದ್ರಗಳ ಸಾಮಾನ್ಯ ನಿಯಂತ್ರಣವು ಸುಧಾರಣಾ ಅಧಿಕಾರಿಯವರಲ್ಲಿ ನಿಹಿತವಾಗಿರತಕ್ಕದ್ದು, ಅವರಿಗೆ ಒಬ್ಬರು ಅಥವಾ ಅದಕ್ಕೂ ಹೆಚ್ಚು ಸಹಾಯಕ ಸುಧಾರಣಾ ಅಧಿಕಾರಿಗಳು ಮತ್ತು ಇನ್‌ಸ್ಪೆಕ್ಟರುಗಳು ನೆರವು ನೀಡಬಹುದು.

**20. ವ್ಯವಸ್ಥಾಪನಾ ಕೇಂದ್ರಗಳ ಮೇಲ್ವಿಚಾರಣೆ.–** ಪ್ರತಿಯೊಂದು ಸುಧಾರಕ ವ್ಯವಸ್ಥಾಪನಾ ಕೇಂದ್ರವು ಒಬ್ಬ ಅಧೀಕ್ಷಕನ ಮೇಲ್ವಿಚಾರಣೆಯಲ್ಲಿರತಕ್ಕದ್ದು ಮತ್ತು ಅಧೀಕ್ಷಕನು ಸುಧಾರಕ ವ್ಯವಸ್ಥಾಪನಾ ಕೇಂದ್ರದ ಆಂತರಿಕ ಆಡಳಿತ ಹಾಗೂ ವ್ಯವಸ್ಥಾಪನಗೆ ಒಳಗಾದವರ ಸಾಮಾನ್ಯ ಕ್ಷೇಮಾಭಿವೃದ್ಧಿಗಾಗಿ ಈ ನಿಯಮಗಳ ಜಾರಿಗೆ ಹೊಣೆಯಾಗಿರತಕ್ಕದ್ದು.

**21. ಸುಧಾರಕ ವ್ಯವಸ್ಥಾಪನಾ ಕೇಂದ್ರಗಳಿಗೆ ಭೇಟಿ.–** ಸುಧಾರಣಾ ಅಧಿಕಾರಿ ಅಥವಾ ಸಹಾಯಕ ಸುಧಾರಣಾಧಿಕಾರಿಯು, ಪ್ರತಿ ಆರು ತಿಂಗಳಿಗೊಮ್ಮೆ ತನ್ನ ನಿಯಂತ್ರಣದಲ್ಲಿರುವ ಸುಧಾರಕ ವ್ಯವಸ್ಥಾಪನಾ ಕೇಂದ್ರಗಳಿಗೆ ಭೇಟಿ ನೀಡತಕ್ಕದ್ದು ಮತ್ತು ಪರಿಶೀಲನೆ ನಡೆಸತಕ್ಕದ್ದು.

**22. ಸುಧಾರಕ ವ್ಯವಸ್ಥಾಪನಾ ಕೇಂದ್ರಗಳಲ್ಲಿ ಪ್ರತ್ಯೇಕ ವಿಭಾಗಗಳ ಏರ್ಪಾಡು.–** (1) ಪ್ರತಿಯೊಂದು ಸುಧಾರಕ ವ್ಯವಸ್ಥಾಪನಾ ಕೇಂದ್ರದಲ್ಲಿ ಈ ಮುಂದಿನ ಬಗೆಯ ವ್ಯವಸ್ಥಾಪನೆಗೊಳಗಾದವರಿಗಾಗಿ ಪ್ರತ್ಯೇಕ ವಿಭಾಗಗಳ ಏರ್ಪಾಡು ಮಾಡತಕ್ಕದ್ದು; ಎಂದರೆ,

(i) ವ್ಯವಸ್ಥಾಪನೆಗೊಳಗಾದ ಒಂಟಿ ಪುರುಷನಿಗಾಗಿ;

(ii) ವ್ಯವಸ್ಥಾಪನೆಗೊಳಗಾದ ಒಂಟಿ ಮಹಿಳಾ ನೆಲಸಿಗಳಿಗಾಗಿ;

(iii) ಒಂದೇ ಕುಟುಂಬಕ್ಕೆ ಸೇರಿದ ವ್ಯವಸ್ಥಾಪನೆಗೊಳಗಾದವರಿಗಾಗಿ;

(iv) ಅಂಥ ವ್ಯವಸ್ಥಾಪನಾ ಕೇಂದ್ರಗಳಲ್ಲಿ ತಮ್ಮ ಹೆಂಡಂದಿರು ಅಥವಾ ಸಂದರ್ಭಾನುಸಾರ ಗಂಡಂದಿರೊಂದಿಗೆ ವಾಸಿಸುವ ವ್ಯವಸ್ಥಾಪನೆಗೊಳಗಾದ ವಿವಾಹಿತರಿಗಾಗಿ.

(2) ಒಂದು ಬಗೆಯ ವ್ಯವಸ್ಥಾಪನೆಗೊಳಗಾದವರನ್ನು ಇನ್ನೊಂದು ಬಗೆಯ ಅಥವಾ ವಿಭಾಗದ ವ್ಯವಸ್ಥಾಪನಾ ಕೇಂದ್ರಕ್ಕೆ ಭೇಟಿ ನೀಡಲು ಅನುಮತಿಸತಕ್ಕದ್ದಲ್ಲ.

**23. ವ್ಯವಸ್ಥಾಪನೆಗೊಳಗಾದವರಿಗೆ ಉದ್ಯೋಗ ಒದಗಿಸುವುದು.-** (1) ವೃದ್ಧಾಪ್ಯದಿಂದ ಅಥವಾ ದೈಹಿಕ ಅಸಾಮರ್ಥ್ಯದಿಂದ ಅನಾರೋಗ್ಯದಿಂದ, ಶ್ರಮ ದುಡಿಮೆಗೆ ಅನರ್ಹನಾಗಿರುವ ಹೊರತು, ಪ್ರತಿಯೊಬ್ಬ ವ್ಯವಸ್ಥಾಪನೆಗೊಳಗಾದವನನ್ನು, ಸುಧಾರಣಾಧಿಕಾರಿಯು ಅಂಥ ಸುಧಾರಕ ವ್ಯವಸ್ಥಾಪನಾ ಕೇಂದ್ರಕ್ಕೆ ಸಂಬಂಧಿಸಿದಂತೆ ಅನುಮೋದಿಸಿದ, ಅವನ ದೈಹಿಕ ಸ್ಥಿತಿಗೆ ಅನುಗುಣವಾಗಿರುವಂಥ ಯಾವುದೇ ವಿಧದ ದುಡಿಮೆ ಅಥವಾ ಉದ್ಯಮ ಅಥವಾ ಕೆಲಸಕ್ಕೆ ನಿಯೋಜಿಸತಕ್ಕದ್ದು.

(2) (ಎ) ತಾತ್ಕಲಿಕವಾದ ದೈಹಿಕ ಅಥವಾ ಮಾನಸಿಕ ಅಸ್ವಸ್ಥತೆಯ ಅಥವಾ ಅನಾರೋಗ್ಯದ ಕಾರಣದಿಂದಾಗಿ ಸುಧಾರಕ ವ್ಯವಸ್ಥಾಪನಾ ಕೇಂದ್ರದಲ್ಲಿ ಇರಲು ಬೇಕಾದ ಸಾಕಷ್ಟು ಜೀವನೋಪಾಯವನ್ನು ಗಳಿಸಲು ಅಸಮರ್ಥನಾದ ಪ್ರತಿಯೊಬ್ಬ ವ್ಯವಸ್ಥಾಪನೆಗೊಳಗಾದವನಿಗೆ, ಅಧೀಕ್ಷಕನು ಅಂಥ ವ್ಯವಸ್ಥಾಪನೆಗೊಳಗಾದವನ ಅಭಿರುಚಿ, ಸಾಮರ್ಥ್ಯ ಮತ್ತು ದೈಹಿಕ ಸ್ಥಿತಿಯನ್ನು ಪರಿಗಣನೆಗೆ ತೆಗೆದುಕೊಂಡು ಸರಳ ಕಸಬುಗಳಲ್ಲಿ ಹಗುರವಾದ ಕೆಲಸವನ್ನು ಕೊಡತಕ್ಕದ್ದು.

(ಬಿ) ಅಂಥ ವ್ಯವಸ್ಥಾಪನೆಗೊಳಗಾದವನು ಯಾವುದೇ ಕೆಲಸ ನಿರ್ವಹಿಸಲು ಅಸಮರ್ಥನಾದರೆ, ಅಂಥ ವ್ಯವಸ್ಥಾಪನೆಗೊಳಗಾದವನಿಗೆ ಅಧೀಕ್ಷಕನು ಉಚಿತ ಅನುದಾನದ ರೂಪದಲ್ಲಿ ದೊರೆಯುವಂಥ ವೃತ್ತಿ ವೇತನವನ್ನು ಮಂಜೂರು ಮಾಡತಕ್ಕದ್ದು.

(ಸಿ) (ಬಿ) ಖಂಡದ ಅಡಿಯಲ್ಲಿ ವೃತ್ತಿ ವೇತನ ನೀಡಿಕೆಯು ಈ ಮುಂದಿನ ಕಾರ್ಯ ವಿಧಾನಕ್ಕೊಳಪಟ್ಟಿರತಕ್ಕದ್ದು, ಎಂದರೆ:-

(i) ಸುಧಾರಕ ವ್ಯವಸ್ಥಾಪನಾ ಕೇಂದ್ರದ ಸಂದರ್ಶಕ ವೈದ್ಯಾಧಿಕಾರಿಯು, ವ್ಯವಸ್ಥಾಪನೆಗೊಳಗಾದವನು ಲಾಭದಾಯಕ ಸಶ್ರಮ ಉದ್ಯೋಗದಲ್ಲಿ ತೊಡಗಲು ಅಸಮರ್ಥನಾಗಿದ್ದಾನೆಂಬುದನ್ನು ಪ್ರಮಾಣೀಕರಿಸತಕ್ಕದ್ದು.

(ii) ವೃತ್ತಿ ವೇತನ ಮಂಜೂರಾತಿಗಾಗಿ ಪ್ರಸ್ತಾವವನ್ನು ವೈದ್ಯಕೀಯ ಪ್ರಮಾಣ ಪತ್ರದೊಂದಿಗೆ ಅನುಮೋದನೆಗಾಗಿ ಸುಧಾರಣಾ ಅಧಿಕಾರಿಗೆ ಸಲ್ಲಿಸತಕ್ಕದ್ದು.

(iii) ಸುಧಾರಣಾ ಅಧಿಕಾರಿಯು, ಕಾರಣಗಳನ್ನು ದಾಖಲು ಮಾಡಿ, (ii)ನೇ ಬಾಬಿನ ಅಡಿಯಲ್ಲಿ ಅನುಮೋದನೆ ನೀಡುವ ಮೊದಲು, ವೈದ್ಯಕೀಯ ಪ್ರಮಾಣಪತ್ರಕ್ಕೆ ಜಿಲ್ಲಾ ವೈದ್ಯಾಧಿಕಾರಿಯು ಮೇಲು ರುಜು ಮಾಡಬೇಕೆಂದು ಅಗತ್ಯಪಡಿಸಬಹುದು.

**24. ವ್ಯವಸ್ಥಾಪನೆಗೊಳಗಾದವರಿಗೆ ಜೀವನೋಪಾಯ.-** ಅಧೀಕ್ಷಕನು, ಸುಧಾರಕ ವ್ಯವಸ್ಥಾಪನಾ ಕೇಂದ್ರದಲ್ಲಿರುವ ಪ್ರತಿಯೊಬ್ಬ ವ್ಯವಸ್ಥಾಪನೆಗೊಳಗಾದವನಿಗೆ ಸಾಕಷ್ಟು ಜೀವನೋಪಾಯ ಕಲ್ಪಿಸಲಾಗಿರುವುದನ್ನು ಮನದಟ್ಟು ಮಾಡಿಕೊಳ್ಳತಕ್ಕದ್ದು ಮತ್ತು ಈ ಸಂಬಂಧದಲ್ಲಿ ಯಾವುದೇ ತೊಂದರೆಯುಂಟಾದರೆ, ಅವರು ಅದನ್ನು ಕೂಡಲೇ ಸುಧಾರಣಾ ಅಧಿಕಾರಿಗೆ ವರದಿ ಮಾಡತಕ್ಕದ್ದು.

**25. ವ್ಯವಸ್ಥಾಪನೆಗೊಳಗಾದವರಿಗೆ ಶಿಶಿಕ್ಷು ಅವಧಿಯ ಉದ್ಯೋಗ ಮತ್ತು ಸಹಾಯ ಧನದ ಸಂದಾಯ.-** (1) ಸುಧಾರಕ ವ್ಯವಸ್ಥಾಪನಾ ಕೇಂದ್ರದಲ್ಲಿರುವ ಪ್ರತಿಯೊಬ್ಬ ವ್ಯವಸ್ಥಾಪನೆಗೊಳಗಾದವನಿಗೆ, ಅವನ ಪ್ರವೇಶದ ದಿನಾಂಕದಿಂದ ಇನ್ನೂರು ದಿನಗಳ ಶಿಶಿಕ್ಷು ಅವಧಿಗೆ ಅವನ ನಿರ್ವಹಣೆ ಅಥವಾ ಆಹಾರಕ್ಕಾಗಿ ಶ್ರೇಣಿಯ ಅನುಸಾರ ಸಹಾಯಧನದ ಮೊತ್ತವನ್ನು ನೀಡತಕ್ಕದ್ದು ಮತ್ತು ಅಂಥ ವ್ಯವಸ್ಥಾಪನೆಗೊಳಗಾದವನನ್ನು ಸುಧಾರಕ ವ್ಯವಸ್ಥಾಪನಾ ಕೇಂದ್ರವು ಒದಗಿಸುವ ಯಾವುದಾದರೂ ವೃತ್ತಿಯಲ್ಲಿ ತರಬೇತುಗೊಳಿಸತಕ್ಕದ್ದು.

(2) ಸುಧಾರಣಾಧಿಕಾರಿಯು ಯಾವುದೇ ವ್ಯವಸ್ಥಾಪನೆಗೊಳಗಾದವನ ಸಂಬಂಧದಲ್ಲಿ ಶಿಶಿಕ್ಷು ಅವಧಿಯನ್ನು ಮೂನ್ನೂರು ದಿನಗಳವರೆಗೆ ವಿಸ್ತರಿಸಬಹುದು.

(3) ಶಿಶಿಕ್ಷು ಅವಧಿಯ ಮುಕ್ತಾಯದ ತರುವಾಯ, ವ್ಯವಸ್ಥಾಪನೆಗೊಳಗಾದವನಿಗೆ ಸಾಧ್ಯವಾದಷ್ಟು ಮಟ್ಟಿಗೆ, ಕರಾರು ವ್ಯವಸ್ಥೆಯ ಮೇಲೆ ತುಂಡು ಕೆಲಸದ ಮೂಲಕ ಕೆಲಸ ನೀಡತಕ್ಕದ್ದು.

(4) ಈ ನಿಯಮದಲ್ಲಿ ಏನೇ ಒಳಗೊಂಡಿದ್ದರೂ, ಅಧೀಕ್ಷಕನು, ಶಿಶಿಕ್ಷು ಅವಧಿಯಲ್ಲಾಗಲಿ ಅಥವಾ ಆ ನಂತರವಾಗಲಿ, ಯಾರೇ ವ್ಯವಸ್ಥಾಪನೆಗೊಳಗಾದವನನ್ನು ಗಿರಣಿ ಕೆಲಸ ಅಥವಾ ಖಾಸಗಿ ಕಂಟ್ರಾಕ್ಟರುಗಳ ಕೈಕೆಳಗಿನ ಕೆಲಸದಂಥ ಅವನಿಗೆ ಪರಿಚಿತವಾದ ಸಂಭಾವನೆ ನೀಡುವ ಯಾವುದಾದಾರೂ ಉದ್ಯೋಗಕ್ಕೆ ನಿಯೋಜಿಸಬಹುದು.

**26. ವ್ಯವಸ್ಥಾಪಕನ ಗಳಿಕೆಗಳು.-** ವ್ಯವಸ್ಥಾಪಕನ, ಸುಧಾರಕ ವ್ಯವಸ್ಥಾಪನಾ ಕೇಂದ್ರದಲ್ಲಿ ತನ್ನ ನಿರ್ವಹಣೆಗೆ ಅಗತ್ಯವಿರುವುದಕ್ಕಿಂತ ಹೆಚ್ಚಿನ ಹಣವನ್ನು ಗಳಿಸಿದಾಗ, ಸೂಪರಿಂಟೆಂಡೆಂಟರು, ಆ ಹೆಚ್ಚಿನ ಹಣವನ್ನು, ಕಾಲಕಾಲಕ್ಕೆ ಅಂಥ ವ್ಯವಸ್ಥಾಪನೆಗೊಳಗಾದವನ ಹೆಸರಿನಲ್ಲಿ ತೆರೆಯಲಾದ ಉಳಿತಾಯ ಖಾತೆಯಲ್ಲಿ ಠೇವಣಿ ಇಡಬಹುದು. ಅಂಥ ಖಾತೆಯನ್ನು ತೆರೆದಾಗ ಪಾಸ್ ಪುಸ್ತಕವನ್ನು ವ್ಯವಸ್ಥಾಪನೆಗೊಳಗಾದವನು ಸುಧಾರಕ ವ್ಯವಸ್ಥಾಪನಾ ಕೇಂದ್ರವನ್ನು ಬಿಡುವ ಸಮಯದಲ್ಲಿ ಅವನಿಗೆ ಒಪ್ಪಿಸತಕ್ಕದ್ದು.

**27. ವ್ಯವಸ್ಥಾಪನೆಗೊಳಗಾದವರಿಗೆ ಉಡುಪುಗಳ ಸರಬರಾಜು.-** ಪ್ರತಿಯೊಬ್ಬ ವ್ಯವಸ್ಥಾಪನೆಗೊಳಗಾದವನಿಗೆ, ಪ್ರವೇಶ ದೊರೆತ ಮೇಲೆ, ಸರ್ಕಾರಿ ವೆಚ್ಚದಲ್ಲಿ ಒಂದು ಜೊತೆ ಉಡುಪು ಮತ್ತು ಹಾಸಿಗೆಗಳನ್ನು ಒಮ್ಮೆಮಾತ್ರ ಕೆಳಗೆ ನಿರ್ದಿಷ್ಟಪಡಿಸಲಾದಂತೆ ಒದಗಿಸತಕ್ಕದ್ದು:-

**ಪುರುಷ ಮತ್ತು ಮಹಿಳಾ ನೆಲಸಿಗರಿಬ್ಬರಿಗೂ ಹಾಸಿಗೆಯ ಪ್ರಮಾಣ:**

| | | |
|---|---|---|
| 1) | ಹತ್ತಿ ಉಣ್ಣೆಯ ಬ್ಲಾಂಕೆಟ್ ಅಥವಾ ಘೋಂಗಡಿ | 1 |
| 2) | ಹತ್ತಿ ಶೀಟು | 1 |
| 3) | ಸಿಂಗಲ್ ಕಾರ್ಪೆಟ್ | 1 |

**ಉಡುಪು (ಪುರುಷ ನೆಲೆಸಿಗರಿಗೆ)**

| | | |
|---|---|---|
| 1) | ಹತ್ತಿ ಷರ್ಟ್‌ಗಳು ಅಥವಾ ಟ್ರೌಶರ್ ಗಳು ಅಥವಾ ಅವಶ್ಯವಿರಬಹುದಾದಂತೆ ಧೋತಿಗಳು | 2 |
| 2) | ಹತ್ತಿ ಷರ್ಟ್‌ಗಳು | 2 |
| 3) | ಟವಲ್ ಗಳು ದೊಡ್ಡ ಅಳತೆ | 2 |
| 4) | ಲಂಗೋಟಿಗಳು | 2 |
| 5) | ಒಂದು ಉಣ್ಣೆ ಹತ್ತಿ ಜಾಕೆಟ್ | 1 |
| 6) | ಹತ್ತಿಯ ಟೋಪಿಗಳು | 2 |

**ಉಡುಪುಗಳು (ಮಹಿಳಾ ನೆಲೆಸಿಗರಿಗೆ)**

| | | |
|---|---|---|
| 1) | ಸೀರೆಗಳು 18 X 3 1/2 | 2 |
| 2) | ಚೋಲಿ | 2 |
| 3) | ಟವಲ್ ಗಳು ದೊಡ್ಡ ಅಳತೆ | 2 |
| 4) | ಸಿ ಡಬ್ಲ್ಯು ಜಾಕೆಟ್ | 1 |
| 5) | ಬಿಳಿ ಮಲ್ ಮಲ್ ತುಂಡು | 3 ಗಜ |

ಸುಧಾರಣಾಧಿಕಾರಿಯ ವಿವೇಚನೆಯ ಮೇರೆಗೆ ವ್ಯವಸ್ಥಾಪನೆಗೊಳಗಾದವನ ದೈಹಿಕ ಅಥವಾ ಮಾನಸಿಕ ಅಸ್ವಸ್ಥತೆಯ ಕಾರಣದಿಂದಾಗಿ ಅವುಗಳನ್ನು ಖರೀದಿಸಲು ಅವನು ಅಸಮರ್ಥನಾಗಿದ್ದರೆ, ಅವನಿಗೆ ಎರಡನೆಯ ಬಾರಿ ಉಡುಪು ಮತ್ತು ಹಾಸಿಗೆ ಸಾಮಾನುಗಳನ್ನು ಸರಬರಾಜು ಮಾಡಬಹುದು.

**28. ವ್ಯವಸ್ಥಾಪನೆಗೊಳಗಾದವನು ಅಪ್ಪಣೆ ಚೀಟಿಯಿಲ್ಲದೆ ಪರಿಮಿತಿಗಳನ್ನು ಬಿಡಬಾರದು.-** (1) (3)ನೇ ಉಪನಿಯಮದ ಅಡಿಯಲ್ಲಿ ವಿನಾಯಿತಿಗೊಳಿಸಿದ ಹೊರತು, ಯಾರೇ ವ್ಯವಸ್ಥಾಪನೆಗೊಳಗಾದವನು ಅಪ್ಪಣೆ ಚೀಟಿ ಇಲ್ಲದೆ ಸುಧಾರಕ ವ್ಯವಸ್ಥಾಪನಾ ಕೇಂದ್ರದ ಪರಿಮಿತಿಯನ್ನು ಬಿಡತಕ್ಕದ್ದಲ್ಲ. ಸುಧಾರಕ ವ್ಯವಸ್ಥಾಪನಾ ಕೇಂದ್ರದ ಪರಿಮಿತಿಗಳು ಸುಧಾರಣಾಧಿಕಾರಿಯು ನಿರ್ದಿಷ್ಟಪಡಿಸಬಹುದಾದಂತೆ ಇರತಕ್ಕದ್ದು.

(2) ವ್ಯವಸ್ಥಾನೆಗೊಳಗಾದವನು, ರಾಜ್ಯದಲ್ಲಿನ ಯಾವುದೇ ಸ್ಥಳಕ್ಕೆ ತೆರಳಲು ನಮೂನೆ 'ಜಿ' ಯಲ್ಲಿ ಒಂದು ಅಪ್ಪಣೆ ಚೀಟಿಯನ್ನು ಅಧೀಕ್ಷಕನು ಎರಡು ತಿಂಗಳಿಗಿಂತ ಹೆಚ್ಚಿಲ್ಲದ ಅವಧಿಗೆ ಸದರಿ ನಮೂನೆಯಲ್ಲಿ ನಿರ್ದಿಷ್ಟಪಡಿಸಲಾದ ನಿಬಂಧನೆಗಳಿಗೊಳಪಟ್ಟು ಮಂಜೂರು ಮಾಡಬಹುದು.

(3) ಸುಧಾರಣಾಧಿಕಾರಿಯು, ಯಾರೇ ವ್ಯವಸ್ಥಾಪನೆಗೊಳಗಾದವನಿಗೆ ಯಾವುದೇ ನಿರ್ದಿಷ್ಟ ಅವಧಿಯವರೆಗೆ ತೆರಳಲು ನಮೂನೆ 'ಜಿ'ಯಲ್ಲಿ ಅಪ್ಪಣೆ ಚೀಟಿಯನ್ನು ನೀಡಬಹುದು.

(4) ಸುಧಾರಣಾಧಿಕಾರಿಯು, ವಿಶೇಷ ಸಂದರ್ಭಗಳಲ್ಲಿ, ಯಾರೇ ವ್ಯವಸ್ಥಾಪನೆಗೊಳಗಾದವನು ಯಾವುದೇ ಸ್ಥಳಕ್ಕೆ ತೆರಳಲು ಅಪ್ಪಣೆ ಚೀಟಿಯನ್ನು ಒಯ್ಯುವುದರಿಂದ ವಿನಾಯಿತಿ ನೀಡಬಹುದು.

**29. ವ್ಯವಸ್ಥಾಪನೆಗೊಳಗಾದವನು ಸೂಚಿಸುವುದು.-** 28ನೇ ನಿಯಮದ ಅಡಿಯಲ್ಲಿ ನೀಡಲಾದ ಅಪ್ಪಣೆ ಚೀಟಿಯನ್ನು ಬಳಸುವ ವ್ಯವಸ್ಥಾಪನೆಗೊಳಗಾದವನು ಅಪ್ಪಣೆ ಚೀಟಿಯಲ್ಲಿ ನಿರ್ದಿಷ್ಟಪಡಿಸಿದ, ತಾನು ಆಗಮಿಸಿರುವ ಗ್ರಾಮದ, ಪಟ್ಟಣದ, ನಗರದ ಅಥವಾ ಸುಧಾರಕ ವ್ಯವಸ್ಥಾಪನಾ ಕೇಂದ್ರದ ಪ್ರಾಧಿಕಾರಿಗೆ ತನ್ನ ಆಗಮನದ ಬಗ್ಗೆ ಕೂಡಲೇ ತಿಳಿಸತಕ್ಕದ್ದು ಮತ್ತು ಆ ನಂತರ, ಅಪ್ಪಣೆ ಚೀಟಿಯಲ್ಲಿ ನಿರ್ದಿಷ್ಟಪಡಿಸಬಹುದಾದಂಥ ವೇಳೆಗಳಲ್ಲಿ ಮತ್ತು ಸ್ಥಳಗಳಲ್ಲಿ ಹಾಜರಾಗತಕ್ಕದ್ದು.

**30. ವ್ಯವಸ್ಥಾಪನೆಗೊಳಗಾದವನನ್ನು ಹಾಜರಿಕೂಗುವುದು.-** 28ನೇ ನಿಯಮದ ಅಡಿಯಲ್ಲಿ ನೀಡಲಾದ ಅಪ್ಪಣೆ ಚೀಟಿಯ ಮೇಲೆ ಗೈರು ಹಾಜರಾದ ಅಥವಾ ಸುಧಾರಣಾಧಿಕಾರಿಯು ಹಾಜರಾತಿಯಿಂದ ವಿನಾಯಿತಿಗೊಳಿಸಿದ ಹೊರತು, ಪ್ರತಿಯೊಬ್ಬ

ವ್ಯವಸ್ಥಾಪನೆಗೊಳಗಾದವನು, ಸುಧಾರಣಾಧಿಕಾರಿಯು ಪ್ರತಿದಿನ ನಿಗದಿ ಪಡಿಸಬಹುದಾದಂತಹ ವೇಳೆ ಅಥವಾ ವೇಳೆಗಳಲ್ಲಿ ಮತ್ತು ಈ ಉದ್ದೇಶಕ್ಕಾಗಿ ಅಧೀಕ್ಷಕನು ಗೊತ್ತುಪಡಿಸಬಹುದಾದಂಥ ವ್ಯಕ್ತಿಗಳ ಮುಂದೆ ಮತ್ತು ಅಂಥ ಸ್ಥಳಗಳಲ್ಲಿ ಹಾಜರಾತಿ ಕೂಗುವಾಗ ಭಾಗವಹಿಸತಕ್ಕದ್ದು.

31. **ವ್ಯವಸ್ಥಾಪನೆಗೊಳಗಾದವನ ಶೋಧನೆ.–** ಅಧೀಕ್ಷಕನು ಅಥವಾ ಈ ಸಂಬಂಧದಲ್ಲಿ ಸುಧಾರಣಾಧಿಕಾರಿಯವರಿಂದ ಪ್ರಾಧಿಕೃತರಾದ ಸುಧಾರಕ ವ್ಯವಸ್ಥಾಪನಾ ಕೇಂದ್ರದ ಯಾರೇ ಸಿಬ್ಬಂದಿ ಸದಸ್ಯನು, ಯಾರೇ ವ್ಯವಸ್ಥಾಪನೆಗೊಳಾದವನು ಪ್ರವೇಶ ಪಡೆದ ಮೇಲೆ ಮತ್ತು ಅವಶ್ಯವಿರುವಾಗಲೆಲ್ಲ ಅವನನ್ನು ಶೋಧಿಸಬಹುದು ಮತ್ತು ಅವನ ವೈಯಕ್ತಿಕ ಸ್ವತ್ತುಗಳನ್ನು ಹಾಗೂ ಅವನ ನಿವಾಸವನ್ನು ತಪಾಸಣೆ ಮಾಡಬಹುದು. ಮದ್ಯ, ಅಫೀಮು, ಗಾಂಜಾ ಮುಂತಾದ ಯಾವುವೇ ನಿಷೇದಿತ ವಸ್ತುಗಳು ಹಾಗೂ ಅಪರಾಧಕ್ಕಾಗಿ ಬಳಸುವ ಆಯುಧ ವಸ್ತುಗಳು ಅಥವಾ ಕಳವು ಮಾಲೆಂದು ಶಂಕಿಸಲಾದ ಯಾವುದೇ ಸ್ವತ್ತು ವ್ಯವಸ್ಥಾಪನೆಗೊಳಗಾದವನಲ್ಲಿ ಕಂಡು ಬಂದರೆ ಅವುಗಳನ್ನು ವಶಪಡಿಸಿಕೊಳ್ಳತಕ್ಕದ್ದು. ವಶಪಡಿಸಿಕೊಂಡ ತರುವಾಯ, ಅಧೀಕ್ಷಕನು ಒಂದು ವಿಚಾರಣೆ ನಡೆಸತಕ್ಕದ್ದು, ಆತನು ಯಾರಿಂದ ಸ್ವತ್ತನ್ನು ವಶಪಡಿಸಿಕೊಳ್ಳಲಾಗಿದೆಯೋ ಆ ವ್ಯಕ್ತಿಯ ವ್ಯವಸ್ಥಾಪನಾ ಕೇಂದ್ರದ ಬಗ್ಗೆ ಮತ್ತು ಆತನ ಸ್ವಾಧೀನದಲ್ಲಿದ್ದ ವಸ್ತುವಿನ ಬಗ್ಗೆ ದಾಖಲು ಮಾಡತಕ್ಕದ್ದು. ನಂತರ ಅಧೀಕ್ಷಕನು ಸ್ವತ್ತನ್ನು ಕಾನೂನಿಗನುಸಾರ ವಿಲೆ ಮಾಡಬಹುದು.

32. **ವ್ಯವಸ್ಥಾಪನೆಗೊಳಗಾದವನ ಸಾಕು ಪ್ರಾಣಿಗಳು.–** ಸುಧಾರಣಾಧಿಕಾರಿಯು, ಸುಧಾರಕ ವ್ಯವಸ್ಥಾಪನಾ ಕೇಂದ್ರದಲ್ಲಿರುವ ಯಾರೇ ವ್ಯವಸ್ಥಾಪನೆಗೊಳಗಾದವನು ಸಾಕು ಪ್ರಾಣಿಗಳನ್ನು ಇಟ್ಟುಕೊಳ್ಳಬಹುದೆಂಬ ಬಗ್ಗೆ ಖಚಿತಪಡಿಸಲು ಮತ್ತು ಅವುಗಳನ್ನು ಸರಿಯಾದ ನಿಯಂತ್ರಣದಲ್ಲಿ ಮತ್ತು ನಿರ್ಮಲವಾದ ಸ್ಥಿತಿಯಲ್ಲಿ ಇಟ್ಟಿರುವ ಬಗ್ಗೆ ಖಚಿತಪಡಿಸಲು ಆದೇಶಗಳನ್ನು ಹೊರಡಿಸತಕ್ಕದ್ದು. ಆದೇಶಗಳನ್ನು ಉಪೇಕ್ಷಿಸುವ ಯಾರೇ ವ್ಯವಸ್ಥಾಪನೆಗೊಳಗಾದವನ ಪ್ರಾಣಿಗಳನ್ನು ಮಾರಾಟ ಮಾಡಬಹುದು ಮತ್ತು ಅದರ ಉತ್ಪನ್ನವನ್ನು ಮಾಲೀಕನಿಗೆ ನೀಡತಕ್ಕದ್ದು.

33. **ವ್ಯವಸ್ಥಾಪನೆಗೊಳಗಾದವನ ಕರ್ತವ್ಯಗಳು.–** ವ್ಯವಸ್ಥಾಪನೆಗೊಳಗಾದವನು,-

(ಎ) ಅವನಿಗೆ ನೀಡಿದ ಯಾವುದೇ ಸೂಕ್ತ ಕೆಲಸವನ್ನು ನಿರ್ವಹಿಸಲು ಅಥವಾ ಅಧೀಕ್ಷಕನು ನೀಡಿದ ಯಾವುದೇ ಕೆಲಸದಲ್ಲಿ ತೊಡಗಲು ನಿರಾಕರಿಸತಕ್ಕದ್ದಲ್ಲ ;

(ಬಿ) ಯಾವುದೇ ಅಸಭ್ಯ ಕೃತ್ಯವನ್ನು ಮಾಡತಕ್ಕದ್ದಲ್ಲ ;

(ಸಿ) ಸುಧಾರಕ ವ್ಯವಸ್ಥಾಪನಾ ಕೇಂದ್ರದ ಸರಿಯಾದ ನೈರ್ಮಲ್ಯವನ್ನು ಖಚಿತಪಡಿಸಲು ಅಧೀಕ್ಷಕನು ಹೊರಡಿಸಿದ ಯಾವುವೇ ಆದೇಶಗಳನ್ನು ಪಾಲಿಸಲು ನಿರಾಕರಿಸತಕ್ಕದ್ದಲ್ಲ;

(ಡಿ) ಅನುಮತಿ ಇಲ್ಲದೆ, ಮದ್ಯ, ಅಫೀಮು, ಗಾಂಜ ಅಥವಾ ಇತರ ಮಾದಕ ದ್ರವ್ಯಗಳನ್ನು ಪಾಲು ತೆಗೆದುಕೊಳ್ಳತಕ್ಕದ್ದಲ್ಲ ಅಥವಾ ಅವುಗಳನ್ನು ಸ್ವಾಧೀನದಲ್ಲಿಟ್ಟುಕೊಳ್ಳತಕ್ಕದ್ದಲ್ಲ ;

(ಇ) ಅಸಭ್ಯವಾಗಿ ವರ್ತಿಸತಕ್ಕದ್ದಲ್ಲ ಅಥವಾ ಹಿಂಸಾವರ್ತನೆಯಿಂದ ಅಥವಾ ಜಗಳವಾಡುವುದರ ಮೂಲಕ ಯಾವುದೇ ರೀತಿಯ ತೊಂದರೆಯುಂಟು ಮಾಡತಕ್ಕದ್ದಲ್ಲ ;

(ಎಫ್) ಜೂಜು ಆಡತಕ್ಕದ್ದಲ್ಲ ಅಥವಾ ಪಣ ಕಟ್ಟತಕ್ಕದ್ದಲ್ಲ ;

(ಜಿ) ಯಾವುದೇ ವೃತ್ತಿ ಸಂಘ ಅಥವಾ ರಾಜಕೀಯ ಸಂಘಟನೆಗಳಿಗೆ ಸೇರತಕ್ಕದ್ದಲ್ಲ ;

(ಎಚ್) ಭಿಕ್ಷೆ ಬೇಡತಕ್ಕದ್ದಲ್ಲ ;

(ಐ) ಅಧೀಕ್ಷಕನು ನೀಡಿದ ಕಾನೂನು ಬದ್ಧ ಆದೇಶವನ್ನು ಪಾಲಿಸಲು ಹಿಂದೆಗೆಯತಕ್ಕದ್ದಲ್ಲ ಅಥವಾ ನಿರಾಕರಿಸತಕ್ಕದ್ದಲ್ಲ ಅಥವಾ ತನ್ನ ಚಲನವಲನದ ಬಗ್ಗೆ ನಿಜ ಸಂಗತಿ ನೀಡಲು ನಿರಾಕರಿಸತಕ್ಕದ್ದಲ್ಲ ;

(ಜೆ) ಅಧೀಕ್ಷಕನ ಒಂದು ಅನುಮತಿ ಪತ್ರ ಇಲ್ಲದೆ, ಐದು ರೂಪಾಯಿಗಳನ್ನು ಮೀರಿದ ಮೌಲ್ಯದ ಚರ ಸ್ವತ್ತನ್ನು ಅಡಮಾನ ಮಾಡತಕ್ಕದ್ದಲ್ಲ ಅಥವಾ ಮಾರಾಟ ಮಾಡತಕ್ಕದ್ದಲ್ಲ ;

(ಕೆ) ಅಪರಾಧದ ಒಂದು ಆಯುಧವನ್ನಾಗಿ ಬಳಸಬಹುದಾದುದೆಂದು ಅಧೀಕ್ಷಕನು ನಿಷೇಧಿಸಿದ ಯಾವುದೇ ವಸ್ತುವನ್ನು ತನ್ನ ಸ್ವಾಧೀನದಲ್ಲಿ ಹೊಂದಿರತಕ್ಕದ್ದಲ್ಲ;

(ಎಲ್) ಸುಧಾರಕ ವ್ಯವಸ್ಥಾಪನಾ ಕೇಂದ್ರದ ಹಿತದೃಷ್ಟಿಯಿಂದ, ಶಿಸ್ತು ನಿರ್ವಹಣೆಯ ಸಂಬಂಧದಲ್ಲಿ ಸಹಕರಿಸುವಂತೆ ಅಥವಾ ಒಂದು ಸುಧಾರಕ ವ್ಯವಸ್ಥಾಪನಾ ಕೇಂದ್ರದ ಅಧಿಕಾರಿಗೆ ನೆರವು ನೀಡುವಂತೆ ಕರೆದಾಗ ಹಾಗೆ ನೆರವು ನೀಡಲು ತಪ್ಪತಕ್ಕದ್ದಲ್ಲ;

(ಎಂ) ಸ್ವತ: ತನಗೆ ಯಾವುದೇ ಅನಾರೋಗ್ಯ, ಗಾಯ ಅಥವಾ ಅಸಮರ್ಥತೆ ಉಂಟು ಮಾಡಿಕೊಳ್ಳುವ ಉದ್ದೇಶದಿಂದ ಯಾವುದೇ ಕೃತ್ಯವನ್ನು ಮಾಡತಕ್ಕದ್ದಲ್ಲ ಅಥವಾ ಮಾಡುವುದನ್ನು ಬಿಟ್ಟುಬಿಡತಕ್ಕದ್ದಲ್ಲ.

(ಎನ್) ಅವನನ್ನು ವಹಿಸಿಕೊಡಲಾದ ಕಾರ್ಯತಂಡದಿಂದ ಅಥವಾ ಯಾವುದೇ ನಿರ್ದಿಷ್ಟ ಸಮಯದಲ್ಲಿ ಅವನು ಹಾಜರಿರಬೇಕೆಂದು ಅಗತ್ಯಪಡಿಸಿದ ಸ್ಥಳದಿಂದ ಅನುಮತಿ ಇಲ್ಲದೆ ಹೋಗತಕ್ಕದ್ದಲ್ಲ;

(ಓ) ಅವನನ್ನು ಕಾನೂನು ಬದ್ಧವಾಗಿ ತಂಗಲು ಅಗತ್ಯಪಡಿಸಲಾದ ಸುಧಾರಕ ವ್ಯವಸ್ಥಾಪನಾ ಕೇಂದ್ರದ ಪರಿಮಿತಿಯೊಳಗಿಂದ ತಪ್ಪಿಸಿಕೊಳ್ಳಲು ಪ್ರಯತ್ನಿಸತಕ್ಕದ್ದಲ್ಲ.

**34. 33ನೇ ನಿಯಮದ ಉಲ್ಲಂಘನೆಗೆ ಸಂಬಂಧಿಸಿದಂತೆ ದಂಡ.–** ಒಬ್ಬ ವ್ಯವಸ್ಥಾಪನೆಗೊಳಗಾದವನಿಂದ ನಡೆದ 33ನೇ ನಿಯಮದ ಯಾವುದೇ ಉಲ್ಲಂಘನೆಗೆ ಸಂಬಂಧಿಸಿದಂತೆ ಅಧೀಕ್ಷಕನ ವಿವೇಚನೆಯ ಮೇರೆಗೆ, ಅಪರಾಧದ ಸ್ವರೂಪದ ಅನುಸಾರ ಅಥವಾ ಲಿಖಿತದಲ್ಲಿ ದಾಖಲು ಮಾಡದ ಇತರ ಕಾರಣಗಳಿಗಾಗಿ ಈ ಮುಂದಿನ ಯಾವುದಾದರೂ ಒಂದು ರೀತಿಯಲ್ಲಿ ಅಥವಾ ಹೆಚ್ಚಿನ ರೀತಿಗಳಲ್ಲಿ ವ್ಯವಹರಿಸಬಹುದು.

(ಎ) ಒಂದು ಔಪಚಾರಿಕ ಎಚ್ಚರಿಕೆ ನೀಡುವುದು;

(ಬಿ) ವ್ಯವಸ್ಥಾಪನಾ ಕೇಂದ್ರದ ಅಧೀಕ್ಷಕನ ವಿವೇಚನೆಯ ಮೇರೆಗೆ ಹೆಚ್ಚು ಅಥವಾ ಅತಿ ಶ್ರಮಕಾರಿ ಕೆಲಸ ನೀಡುವುದು;

(ಸಿ) ಮಾಡಿದ ಕೆಲಸಕ್ಕೆ ಕಡಿಮೆ ಮಜೂರಿ ನೀಡುವುದು ಅಥವಾ ಮಜೂರಿ ಕೊಡದೆ ಇರುವುದು;

(ಡಿ) ರಜೆಯನ್ನು ತಡೆಹಿಡಿಯುವುದು ಅಥವಾ ರದ್ದು ಪಡಿಸುವುದು;

(ಇ) ವ್ಯವಸ್ಥಾಪನಾ ಕೇಂದ್ರದೊಳಗೆ ಲಾಕಪ್ ನಲ್ಲಿ ಬಂಧಿಸುವುದು; ಮತ್ತು

(ಎಫ್) ದಂಡ ವಿಧಿಸುವುದು:

ಪರಂತು, ಈ ನಿಯಮಗಳ ಅಡಿಯಲ್ಲಿನ ಶಿಕ್ಷೆಯ ಎಲ್ಲ ಆದೇಶಗಳು ಸುಧಾರಣಾಧಿಕಾರಿಯಿಂದ ಪುನರೀಕ್ಷಣೆಗೆ ಬದ್ಧವಾಗಿರತಕ್ಕದ್ದು.

**35. ಅಧೀಕ್ಷಕನಿಂದ ದಂಡ ವಸೂಲಿ.–** ಅಧೀಕ್ಷಕನು, 34ನೇ ನಿಯಮದ ಅಡಿಯಲ್ಲಿ ವಿಧಿಸಲಾದ ಯಾವುದೇ ದಂಡವನ್ನು ಮತ್ತು ಜಾಮೀನುದಾರನಿಂದ ಬಾಕಿ ಇರುವ ಮೊತ್ತವನ್ನು, ಇಡಿಗಂಟಿನಲ್ಲಾಗಲಿ ಅಥವಾ ಕಂತುಗಳ ಮೂಲಕವಾಗಲಿ ವಸೂಲಿ ಮಾಡುವ ಅಧಿಕಾರ ಹೊಂದಿರತಕ್ಕದ್ದು ಮತ್ತು ದಂಡವನ್ನು ಅಥವಾ ಜಾಮೀನು ಪತ್ರದ ಹಣವನ್ನು ಸಂದಾಯ ಮಾಡಲು ಉದ್ದೇಶಪೂರ್ವಕವಾಗಿ ತಪ್ಪಿದಲ್ಲಿ, ದಂಡ ವಿಧಿಸಲಾದ ವ್ಯಕ್ತಿಯಿಂದ ಮತ್ತು ಜಾಮೀನುದಾರನು ವ್ಯವಸ್ಥಾಪನೆಗೊಳಗಾದವನಾಗಿದ್ದರೆ ಅವನಿಂದ ಚರ ಆಸ್ತಿಯನ್ನು ಸ್ವಾಧೀನ ಪಡಿಸಿಕೊಳ್ಳಲು ಮತ್ತು ಮಾರಾಟ ಮಾಡಲು ಆತನು ಹಕ್ಕುಳ್ಳವನಾಗಿರತಕ್ಕದ್ದು.

**36. ವ್ಯವಸ್ಥಾಪನೆಗೊಳಗಾದವನ ಬಳಿ ಕಂಡು ಬಂದ ಮಾದಕ ವಸ್ತುಗಳನ್ನು ಜಪ್ತಿ ಮಾಡುವುದು.–** ಅಧೀಕ್ಷಕನು ಅಥವಾ ಈ ಸಂಬಂಧದಲ್ಲಿ ಸುಧಾರಣಾ ಅಧಿಕಾರಿಯು ಈ ಸಂಬಂಧವಾಗಿ ಪ್ರಾಧಿಕೃತಗೊಳಿಸಿದ ಸುಧಾರಕ ವ್ಯವಸ್ಥಾಪನಾ ಕೇಂದ್ರದ ಯಾರೇ ಸಿಬ್ಬಂದಿಯು 33ನೇ ನಿಯಮದ (ಡಿ) ಖಂಡದ ಅಡಿಯಲ್ಲಿ ಅನುಮತಿ ಇಲ್ಲದೆ ಯಾರೇ ವ್ಯವಸ್ಥಾಪನೆಗೊಳಗಾದವನ ಬಳಿ ಕಂಡು ಬರುವ ಯಾವುದೇ ಮಾದಕ ವಸ್ತುಗಳನ್ನು ಅಥವಾ ಯಾವುದೇ ಪಣದ ಹಣ ಅಥವಾ ಜೂಜಾಡುವ ಉದ್ದೇಶಕ್ಕೆ ಬಳಸುವ ಆಟದ ಪರಿಕರಗಳನ್ನು ಜಪ್ತಿ ಮಾಡಿಕೊಳ್ಳಬಹುದು. ಜಪ್ತಿ ಮಾಡಿದ ತರುವಾಯ, ವಶಪಡಿಸಿಕೊಂಡ ವಸ್ತುವಿಗೆ ಸಂಬಂಧಿಸಿದಂತೆ ಅಧೀಕ್ಷಕನು ವಿಚಾರಣೆ ನಡೆಸತಕ್ಕದ್ದು. ಜಪ್ತಿ ಮಾಡಿಕೊಂಡ ವಸ್ತುಗಳು, ಹತ್ತು ರೂಪಾಯಿ ಮೌಲ್ಯವನ್ನು ಮೀರದಿದ್ದ ಒಂದು ಮಾದಕ ವಸ್ತುವನ್ನು ಒಳಗೊಂಡಿದ್ದರೆ ಅಥವಾ ಜೂಜಿನ ಹಣವನ್ನು ಅಧೀಕ್ಷಕನು, ವಿಚಾರಣೆಯ ತರುವಾಯ, ಅದಕ್ಕೆ ಹಕ್ಕುಳ್ಳವನೆಂದು ಕಂಡು ಬರುವ ವ್ಯಕ್ತಿಗೆ ವಸ್ತುಗಳನ್ನು ಹಿಂದಿರುಗಿಸತಕ್ಕದ್ದು ಅಥವಾ ಅವುಗಳನ್ನು ಮಾರಾಟ ಮಾಡುವಂತೆ ಆದೇಶಿಸತಕ್ಕದ್ದು ಮತ್ತು ಮಾರಾಟದ ಹಣವನ್ನು ಅಂಥ ವ್ಯಕ್ತಿಗೆ ನೀಡತಕ್ಕದ್ದು ಅಥವಾ ಮಾದಕ ವಸ್ತುಗಳು ಮತ್ತು ಜೂಜಾಡುವ ಸಾಧನಗಳ ಸಂಬಂಧದಲ್ಲಿ, ಅವುಗಳನ್ನು ನಾಶಪಡಿಸುವಂತೆ ಆದೇಶಿಸತಕ್ಕದ್ದು. ಇತರ ಸಂದರ್ಭಗಳಲ್ಲಿ, ಅಧೀಕ್ಷಕನು ವಿಚಾರಣೆಯ ತರುವಾಯ, ವಸ್ತುಗಳನ್ನು ಸುಧಾರಣಾಧಿಕಾರಿಗೆ ಕಳುಹಿಸತಕ್ಕದ್ದು. ಆತನು ಅಂಥದೇ ರೀತಿಯಲ್ಲಿ ಅವುಗಳನ್ನು ವಿಲೇಮಾಡಬಹುದು.

**37. ರೂಢಿಗತ ಅಪರಾಧಿಯ ಬಂಧನ.-** ಅಧೀಕ್ಷಕನು ಅಥವಾ ಈ ಸಂಬಂಧದಲ್ಲಿ ಅಧೀಕ್ಷಕನಿಂದ ಪ್ರಾಧಿಕೃತನಾದ ಸುಧಾರಕ ವ್ಯವಸ್ಥಾಪನಾ ಕೇಂದ್ರದ ಸಿಬ್ಬಂದಿಯ ಯಾರೇ ಸದಸ್ಯನು, ಅಥವಾ ಯಾರೇ ಪೊಲೀಸ್ ಅಧಿಕಾರಿಯು, ಸುಧಾರಕ ವ್ಯವಸ್ಥಾಪನಾ ಕೇಂದ್ರದಲ್ಲಿ ಇರಿಸುವಂತೆ ಆದೇಶಿಸಲಾದ ಯಾರೇ ರೂಢಿಗತ ಅಪರಾಧಿಯನ್ನು ಅಥವಾ ಸುಧಾರಕ ವ್ಯವಸ್ಥಾಪನಾ ಕೇಂದ್ರದಲ್ಲಿದ್ದು, ಅದರ ಅಭಿರಕ್ಷೆಯಿಂದ ಅಥವಾ ಕಾರಾವಾಸದಿಂದ ಬಿಡುಗಡೆಯಾದವನನ್ನು ಮತ್ತು ಸುಧಾರಕ ವ್ಯವಸ್ಥಾಪನಾ ಕೇಂದ್ರದ ಪರಿಮಿತಿಗಳಿಂದ ತಪ್ಪಿಸಿಕೊಳ್ಳುವ ಅಥವಾ ತಪ್ಪಿಸಿಕೊಳ್ಳಲು ಪ್ರಯತ್ನಿಸುವ ಯಾರೇ ವ್ಯಕ್ತಿಯನ್ನು ಬಂಧಿಸಬಹುದು.

**38. ಒಂದು ಸುಧಾರಕ ವ್ಯವಸ್ಥಾಪನಾ ಕೇಂದ್ರದಿಂದ ಇನ್ನೊಂದಕ್ಕೆ ವ್ಯಕ್ತಿಗಳ ವರ್ಗಾವಣೆ.–** ಅಧೀಕ್ಷಕನು, ಸುಧಾರಕ ವ್ಯವಸ್ಥಾಪನಾ ಕೇಂದ್ರದಲ್ಲಿ ಇರುವುದು ಅನಪೇಕ್ಷಿತವೆಂದು ಪರಿಗಣಿಸಲಾದ ಅಂಥ ಸುಧಾರಕ ವ್ಯವಸ್ಥಾಪನಾ ಕೇಂದ್ರದಲ್ಲಿನ ವ್ಯಕ್ತಿಯ ಹೆಸರನ್ನು ಸುಧಾರಣಾಧಿಕಾರಿಗೆ ವರದಿ ಮಾಡಬಹುದು. ಸುಧಾರಣಾಧಿಕಾರಿಯು, ಅಂಥ ವ್ಯಕ್ತಿಯನ್ನು ಇನ್ನೊಂದು ಸುಧಾರಕ ವ್ಯವಸ್ಥಾಪನಾ ಕೇಂದ್ರಕ್ಕೆ ವರ್ಗಾವಣೆ ಮಾಡುವಂತೆ ಸರ್ಕಾರಕ್ಕೆ ಅಥವಾ ಪ್ರಾಧಿಕೃತ ಅಧಿಕಾರಿಗೆ ಅಂಥ ಪ್ರಕರಣಗಳ ಒಂದು ವರದಿಯನ್ನು ಕಳುಹಿಸತಕ್ಕದ್ದು.

**39. ಲೈಸೆನ್ಸ್ ನ ಮೇಲೆ ವ್ಯವಸ್ಥಾಪನೆಗೊಳಗಾದವನ ಬಿಡುಗಡೆ.-** (1) ವ್ಯವಸ್ಥಾಪನೆಗೊಳಗಾದವನು, ಒಳ್ಳೆಯ ನಡತೆಯ ಬಗ್ಗೆ ತಪ್ಪಾಗಿ ತಿಳಿಯಲು ಸಾಧ್ಯವಿಲ್ಲದಂಥ ಸಾಕ್ಷ್ಯವನ್ನು ನೀಡಿರುವನೆಂದು ಮತ್ತು ಉದ್ಯಮ ಶೀಲತೆಯನ್ನು ಹೊಂದಿರುವನೆಂದು ಮತ್ತು ಅವನು ಪುನ: ಯಾವುದೇ ಅಪರಾಧವನ್ನು ಮಾಡುವ ಸಾಧ್ಯತೆ ಇಲ್ಲವೆಂದು ಮತ್ತು ಅವನು ತನ್ನನ್ನು ಮತ್ತು ತನ್ನ ಅವಲಂಬಿತರನ್ನು ಪ್ರಾಮಾಣಿಕ ರೀತಿಯಲ್ಲಿ ನಿರ್ವಹಣೆ ಮಾಡುವ ಸಾಮರ್ಥ್ಯ ಹೊಂದಿದ್ದಾನೆಂದು ಮತ್ತು ಈ ಮುಂದಿನ ಷರತ್ತುಗಳನ್ನು ಪೂರೈಸಿರುವನೆಂದು, ಎಂದರೆ:-

(ಎ) ವ್ಯವಸ್ಥಾಪನೆಗೊಳಗಾದವನು ಸುಧಾರಕ ವ್ಯವಸ್ಥಾಪನಾ ಕೇಂದ್ರದಲ್ಲಿ ಒಂದು ವರ್ಷಕ್ಕಿಂತ ಕಡಿಮೆಯಲ್ಲದ ಅವಧಿಯವರೆಗೆ ವಾಸಿಸಿದ್ದಾನೆ;

(ಬಿ) ವ್ಯವಸ್ಥಾಪನೆಗೊಳಗಾದವನಿಗೆ ಬಿಡುಗಡೆಯ ದಿನಾಂಕದ ಆರು ತಿಂಗಳ ಹಿಂದಿನ ಅವಧಿಯಲ್ಲಿ ಯಾವುದೇ ಶಿಸ್ತು ಕ್ರಮದಿಂದ ಕೂಡಿದ ಶಿಕ್ಷೆಯನ್ನು ನೀಡಿಲ್ಲ;

(ಸಿ) ವ್ಯವಸ್ಥಾಪನೆಗೊಳಗಾದವನಿಗೆ ಸುಧಾರಕ ವ್ಯವಸ್ಥಾಪನಾ ಕೇಂದ್ರದಲ್ಲಿನ ತರಬೇತಿಯನ್ನು ಪೂರ್ಣಗೊಳಿಸಿದ್ದಾನೆ ಮತ್ತು ಪ್ರಮಾಣ ಪತ್ರ ನೀಡಲಾಗಿದೆ;

(ಡಿ) ವ್ಯವಸ್ಥಾಪನೆಗೊಳಗಾದವನ ಕನಿಷ್ಠ ಒಂದು ನೂರು ರೂಪಾಯಿಗಳನ್ನು ಉಳಿಸಿದ್ದಾನೆ;

(ಇ) ವ್ಯವಸ್ಥಾಪನೆಗೊಳಗಾದವನ ಪೋಷಕನು ಅಥವಾ ನಿಯೋಜಕನು ಅಥವಾ ಸಂಬಂಧಿಯು, ಅವನನ್ನು ಸ್ವೀಕರಿಸಲು ಸಿದ್ಧನಿದ್ದಾನೆ ಮತ್ತು ವ್ಯವಸ್ಥಾಪನೆಗಳಿಗೊಳಗಾದವನು ಮತ್ತೆ ಅಪರಾಧಿಕ ಚಟುವಟಿಕೆಗಳಲ್ಲಿ ತೊಡಗಲು ಬಿಡುವುದಿಲ್ಲವೆಂದು ಮತ್ತು ಅವನು ವ್ಯವಸ್ಥಾಪನೆಗೊಳಗಾದವನನ್ನು ಪ್ರಾಮಾಣಿಕ ಜೀವನೋಪಾಯ ನಡೆಸಲು ವ್ಯವಸ್ಥಾಪನೆಗೊಳಗಾಧವನನ್ನು ಬೆಂಬಲಿಸುನೆಂದು ಅಥವಾ ವ್ಯವಸ್ಥೆ ಮಾಡಿಕೊಡುವನೆಂದು ಆಶ್ವಾಸನೆ ನೀಡಿದ್ದಾನೆ ಮತ್ತು ಪೋಷಕನು ಅಥವಾ ನಿಯೋಜಕ ಅಥವಾ ಸಂಬಂಧಿಯು ಸುಧಾರಣಾಧಿಕಾರಿಯು ನಿಗದಿ ಪಡಿಸಬಹುದಾದಂಥ ಮೊತ್ತಕ್ಕೆ ಒಂದು ಜಾಮೀನು ಪತ್ರವನ್ನು ಬರೆದುಕೊಡಲು ಸಹ ಒಪ್ಪಿಗೆ ನೀಡಿದ್ದಾನೆ,

ಎಂದು ಸರ್ಕಾರ ಅಥವಾ ಈ ಸಂಬಂಧದಲ್ಲಿ ಸರ್ಕಾರದಿಂದ ಪ್ರಾಧಿಕೃತನಾದ ಅಧಿಕಾರಿಯು ಅಭಿಪ್ರಾಯಪಟ್ಟರೆ, ಸರ್ಕಾರ ಅಥವಾ ಪ್ರಾಧಿಕಾರಿಯು ವ್ಯವಸ್ಥಾಪನೆಗೊಳಗಾದವನನ್ನು ಲೈಸೆನ್ಸ್ ಮೇಲೆ ಬಿಡುಗಡೆ ಮಾಡಬಹುದು.

(2) (1) ನೇ ಉಪ ನಿಯಮದ ಅಡಿಯಲ್ಲಿ ಬಿಡುಗಡೆಯಾದ ವ್ಯವಸ್ಥಾಪನೆಗೊಳಗಾದವನಿಗೆ ನಮೂನೆ 'ಎಚ್'ನಲ್ಲಿ ಒಂದು ಲೈಸೆನ್ಸ್ ನೀಡತಕ್ಕದ್ದು.

(3) ಲೈಸೆನ್ಸ್ ಅವಧಿಯು, ನಿರ್ಬಂಧದ ಅವಧಿ ಅಥವಾ ಆದೇಶದ ಮುಕ್ತಾಯದ ದಿನಾಂಕವನ್ನು ಮೀರತಕ್ಕದ್ದಲ್ಲ.

**40. ಲೈಸೆನ್ಸ್ ಮೇಲೆ ಬಿಡುಗಡೆಯಾದ ವ್ಯಕ್ತಿಯು ಪಾಲಿಸಬೇಕಾದ ಷರತ್ತುಗಳು.-** (1) 39ನೇ ನಿಯಮದ ಅಡಿಯಲ್ಲಿ ಸುಧಾರಕ ವ್ಯವಸ್ಥಾಪನಾ ಕೆಂದ್ರದಿಂದ ಲೈಸೆನ್ಸ್ ಮೇಲೆ ಬಿಡುಗಡೆಯಾದ ವ್ಯಕ್ತಿಯು ಈ ಮುಂದಿನ ಷರತ್ತುಗಳನ್ನು ಪಾಲಿಸತಕ್ಕದ್ದು:-

(ಎ) ಅವನು, ಸುಧಾರಣಾಧಿಕಾರಿಯು ತೀರ್ಮಾನಿಸಬಹುದಾದಂಥಹ ಸ್ಥಳದಲ್ಲಿ ವಾಸಿಸತಕ್ಕದ್ದು;

(ಬಿ) ಅವನು, ಯಾವುದೇ ವೃತ್ತಿ ಸಂಘ ಅಥವಾ ರಾಜಕೀಯ ಸಂಘಟನೆಗಳಿಗೆ ಸೇರತಕ್ಕದ್ದಲ್ಲ;

(ಸಿ) ಅವನು ಒಳ್ಳೆಯ ನಡತೆಯವನಾಗಿರತಕ್ಕದ್ದು ;

(ಡಿ) ಹಾಜರಾತಿ ಕೂಗುವ ಬಗ್ಗೆ ಮತ್ತು ಸುಧಾರಣಾಧಿಕಾರಿಯು ಆದೇಶಿಸಬಹುದಾದಂಥ ಅಪ್ಪಣೆ ಚೀಟಿಗಳನ್ನು ತೆಗೆದುಕೊಳ್ಳುವ ಬಗೆಗಿನ ಷರತ್ತುಗಳನ್ನು ಅವನು ಪಾಲಿಸತಕ್ಕದ್ದು ;

(ಇ) ಅವನು ಸುಧಾರಕ ವ್ಯವಸ್ಥಾಪನಾ ಕೇಂದ್ರದಲ್ಲಿ ತರಬೇತಿ ಪಡೆಯುವ ಆದೇಶದ ಮುಕ್ತಾಯದ ಉಳಿದ ಅವಧಿಯವರೆಗೆ ಸುಧಾರಣಾಧಿಕಾರಿಯು ಈ ಸಂಬಂಧದಲ್ಲಿ ನೇಮಕ ಮಾಡಬಹುದಾದಂಥ ಸ್ಥಳೀಯ ಅಧಿಕಾರಿ ಅಥವಾ ಪರಿವೀಕ್ಷಿಸುವ ಅಧಿಕಾರಿ ಅಥವಾ ಸಮಾಜ ಸೇವಕರ ಮೇಲ್ವಿಚಾರಣೆಯಲ್ಲಿರತಕ್ಕದ್ದು ;

(ಎಫ್) (1)ನೇ ಉಪ ನಿಯಮದಲ್ಲಿ ನಮೂದಿಸಲಾದ ಯಾವುವೇ ಷರತ್ತುಗಳನ್ನು ಪಾಲಿಸಲು ತಪ್ಪಿದಲ್ಲಿ, ಅವನು ಸುಧಾರಣಾಧಿಕಾರಿಯ ವಿವೇಚನೆಯ ಮೇರೆಗೆ ಸುಧಾರಕ ವ್ಯವಸ್ಥಾಪನಾ ಕೇಂದ್ರಕ್ಕೆ ಪುನಃ ಸೇರುವುದಕ್ಕೆ ಬದ್ದನಾಗಿರತಕ್ಕದ್ದು.

**41. ಸುಧಾರಣಾಧಿಕಾರಿಯು ಚಲಾಯಿಸಬಹುದಾದ ಅಥವಾ ಆತನು ಪ್ರತ್ಯಾಯೋಜಿಸಬಹುದಾದ ಅಧಿಕಾರಗಳು.-** ಸುಧಾರಣಾಧಿಕಾರಿಯು (i) ಈ ನಿಯಮಗಳ ಅಡಿಯಲ್ಲಿನ ಅಧೀಕ್ಷಕನು ಯಾವುವೇ ಅಧಿಕಾರಗಳನ್ನು ತಾನು ಸ್ವತ: ಚಲಾಯಿಸಬಹುದು; ಅಥವಾ (ii) ಈ ನಿಯಮಗಳ ಅಡಿಯಲ್ಲಿ ವ್ಯವಸ್ಥಾಪನೆಗೊಳಗಾದವನನ್ನು ಬಿಡುಗಡೆ ಮಾಡುವ, ಅವನಿಗೆ ಲೈಸೆನ್ಸ್ ನೀಡುವ ಅಥವಾ ಒಬ್ಬ ವ್ಯವಸ್ಥಾಪನೆಗೊಳಗಾದವನು ಅಪ್ಪಣೆ ಚೀಟಿಗಳನ್ನು ತೆಗೆದುಕೊಳ್ಳುವುದರಿಂದ ವಿನಾಯಿತಿ ನೀಡುವುದನ್ನು ಹೊರತುಪಡಿಸಿ, ಈ ನಿಯಮದ ಅಡಿಯಲ್ಲಿ ತನಗೆ ಪ್ರದತ್ತವಾದ ಯಾವುವೇ ಅಧಿಕಾರಿಗಳನ್ನು ಸಹಾಯಕ ಸುಧಾರಣಾಧಿಕಾರಿಗೆ ಪ್ರತ್ಯಾಯೋಜಿಸಬಹುದು.

**42. ಅಧೀಕ್ಷಕನ ಅಧಿಕಾರಗಳು.-** (1) ಅಧೀಕ್ಷಕನು, ತುರ್ತು ಸಂದರ್ಭಗಳಲ್ಲಿ, ಸುಧಾರಕ ವ್ಯವಸ್ಥಾಪನಾ ಕೇಂದ್ರದಲ್ಲಿ ವ್ಯವಸ್ಥಾಪನೆಗೊಳಗಾದವನ ಜೊತೆಗೆ ವಾಸಿಸಲು ಯಾರೇ ಪ್ರಾಮಾಣಿಕ ಅವಲಂಬಿತರಿಗೆ ಅನುಮತಿ ನೀಡಬಹುದು. ಇತರ ಎಲ್ಲ ಸಂದರ್ಭಗಳಲ್ಲಿ, ಸುಧಾರಣಾಧಿಕಾರಿಯು, ವ್ಯವಸ್ಥಾಪನೆಗೊಳಗಾದವನ ಹಿತದೃಷ್ಟಿಯಿಂದ ಸುಧಾರಕ ವ್ಯವಸ್ಥಾಪನಾ ಕೇಂದ್ರದಲ್ಲಿ ತನ್ನ ಅವಲಂಬಿತರೊಂದಿಗೆ ವಾಸಿಸುವುದು ವಿಹಿತವೆಂದು ಅಭಿಪ್ರಾಯ ಪಟ್ಟಲ್ಲಿ ಅವನು ಇಚ್ಛಿಸಿದರೆ ಸುಧಾರಕ ವ್ಯವಸ್ಥಾಪನಾ ಕೇಂದ್ರದಲ್ಲಿ ವಾಸಿಸಲು ಅವರಿಗೆ ಹಾಗೆ ವಾಸಿಸಲು ಅನುಮತಿ ನೀಡಬಹುದು:

ಪರಂತು, ಅಂಥ ಅನುಮತಿಯನ್ನು ನೀಡುವ ಮೊದಲು ಸುಧಾರಣಾಧಿಕಾರಿಯು:-

(i) ವ್ಯವಸ್ಥಾಪನೆಗೊಳಗಾದವನು ಸೇರಿದ ಕೋಮಿನ ಸಂಪ್ರದಾಯಕ್ಕನುಸಾರವಾಗಿ, ಅವನಿಂದ ಬೇರೆಯಾಗಲು ಸಾಧ್ಯವೇ ಇರದ ಅವಲಂಬಿತರ ನಿರ್ವಹಣೆಗೆ ಜವಾಬ್ದಾರನಾಗಿರುವನೇ ಎಂಬ ಬಗ್ಗೆ ತಾನು ಸೂಕ್ತವೆಂದು ಭಾವಿಸುವಂಥ ವಿಚಾರಣೆಗಳನ್ನು ಮಾಡುವ ಮೂಲಕ ಖಚಿತಪಡಿಸಿಕೊಳ್ಳತಕ್ಕದ್ದು ; ಮತ್ತು

(ii) ಅವಲಂಬಿತರು ಸುಧಾರಕ ವ್ಯವಸ್ಥಾಪನಾ ಕೇಂದ್ರದ ಶಿಸ್ತನ್ನು ಪಾಲಿಸಲು ಬದ್ಧರಾಗಿರತಕ್ಕದ್ದು ಮತ್ತು ತನ್ನ ಯಾರೇ ಅವಲಂಬಿತರು 33ನೇ ನಿಯಮದ (ಬಿ) ಖಂಡದ ಉಪ ಬಂಧವನ್ನು ಉಲ್ಲಂಘಿಸಿದರೆ ವ್ಯವಸ್ಥಾಪನೆಗೊಳಗಾದವನು ಹೊಣೆಯಾಗಿರತಕ್ಕದ್ದು ಎಂಬ ಬಗ್ಗೆ ಆತನಿಂದ ಒಂದು ಮುಚ್ಚಳಿಕೆ ಪಡೆಯತಕ್ಕದ್ದು.

(2) ವ್ಯವಸ್ಥಾಪನೆಗೊಳಗಾದವನ ಅವಲಂಬಿತರು, ಸುಧಾರಕ ವ್ಯವಸ್ಥಾಪನಾ ಕೇಂದ್ರದಲ್ಲಿ ವಾಸಿಸುವವರೆಗೆ ಸುಧಾರಕ ವ್ಯವಸ್ಥಾಪನಾ ಕೇಂದ್ರದ ಶಿಸ್ತನ್ನು, ಅದರಲ್ಲೂ ವಿಶೇಷವಾಗಿ, 33ನೇ ನಿಯಮದ (ಬಿ) ಯಿಂದ (ಐ) ವರೆಗಿನ ಖಂಡಗಳು ಮತ್ತು (ಕೆ) ಖಂಡದಲ್ಲಿ ಇರುವ ಉಪಬಂಧಗಳನ್ನು ಪಾಲಿಸತಕ್ಕದ್ದು.

(3) ವ್ಯವಸ್ಥಾಪನೆಗೊಳಗಾದವನು ತನ್ನ ಅವಲಂಬಿತರ ಮೇಲೆ ಸರಿಯಾದ ನಿಗಾ ಇಡತಕ್ಕದ್ದು ಮತ್ತು ಅವನ ಯಾರೇ ಅವಲಂಬಿತರು ಮಾಡುವ 33ನೇ ನಿಯಮದ ಉಪಬಂಧಗಳ ಯಾವುದೇ ಉಲ್ಲಂಘನೆಗೆ ಒಬ್ಬ ಸಹಾಯಕನಾಗತಕ್ಕದ್ದಲ್ಲ.

(4) ಯಾರೇ ಅವಲಂಬಿತರಿಂದಾದ 33ನೇ ನಿಯಮದ ಉಪಬಂಧಗಳ ಯಾವುದೇ ಉಲ್ಲಂಘನೆಯ ಬಗ್ಗೆ ಅಧೀಕ್ಷಕನ ವಿವೇಚನೆಯ ಮೇರೆಗೆ, 34ನೇ ನಿಯಮದ (1)ರಿಂದ (6)ನೇ ಖಂಡಗಳಲ್ಲಿ ಉಪಬಂಧಿಸಲಾದಂತೆ ವ್ಯವಹರಿಸತಕ್ಕದ್ದು ಮತ್ತು ಅಧೀಕ್ಷಕನು, ಅವಶ್ಯ ವಿಚಾರಣೆಗಳನ್ನು ನಡೆಸಿದ ತರುವಾಯ, ವ್ಯವಸ್ಥಾಪನೆಗೊಳಗಾದವನು ತನ್ನ ಅವಲಂಬಿತರ ಮೇಲೆ ಸರಿಯಾಗಿ ನಿಗಾ ಇಡಲಿಲ್ಲವೆಂದು ಅಥವಾ ವ್ಯವಸ್ಥಾಪನೆಗೊಳಗಾದವನು ನಿಯಮದ ಉಲ್ಲಂಘನೆಗೆ ಸಹಾಯಕನಾಗಿದ್ದಾನೆಂದು ಮನದಟ್ಟಾದರೆ, ಸಂಬಂಧಪಟ್ಟ ವ್ಯವಸ್ಥಾಪನೆಗೊಳಗಾದನಿಗೆ ಶಿಕ್ಷೆ ವಿಧಿಸಬಹುದು.

ವಿವರಣೆ:– ಈ ನಿಯಮದ ಉದ್ದೇಶಕ್ಕಾಗಿ "ಅವಲಂಬಿತರು" ಎಂದರೆ, ಸಂದರ್ಭಾನುಸಾರ, ವ್ಯವಸ್ಥಾಪನೆಗೊಳಗಾದವನ ಹೆಂಡತಿ ಅಥವಾ ಗಂಡ ಮತ್ತು ಅವನ / ಅವಳ ಹದಿನಾರು ವರ್ಷಕ್ಕಿಂತ ಕಡಿಮೆ ವಯಸ್ಸಿನ ಮಕ್ಕಳು.

## ಅಧ್ಯಾಯ -IV

## ಸಂದರ್ಶಕ ಸಮಿತಿಗಳು

**43. ಸಂದರ್ಶಕ ಸಮಿತಿಯ ರಚನೆ.–** ಪ್ರತಿಯೊಂದು ಸುಧಾರಕ ವ್ಯವಸ್ಥಾಪನಾ ಕೇಂದ್ರಕ್ಕೆ ಈ ಮುಂದಿನವರುಗಳನ್ನೊಳಗೊಂಡ ಒಂದು ಸಂದರ್ಶಕ ಸಮಿತಿ ಇರತಕ್ಕದ್ದು:-

(1) (ಎ) ಪದನಿಮಿತ್ತ ಸದಸ್ಯರು; ಮತ್ತು

(ಬಿ) ಅಧಿಕಾರೇತರ ಸದಸ್ಯರು.

(2) ಈ ಮುಂದಿನ ಅಧಿಕಾರಿಗಳು ಸಮಿತಿಯ ಪದನಿಮಿತ್ತ ಸದಸ್ಯರುಗಳಾಗಿರತಕ್ಕದ್ದು; ಎಂದರೆ:-

(i) ವಿಭಾಗಾಧಿಕಾರಿ;

(ii) ಜಿಲ್ಲೆಯ ಜಿಲ್ಲಾ ಮ್ಯಾಜಿಸ್ಟ್ರೇಟ್;

(iii) ಜಿಲ್ಲೆಯ ಪೊಲೀಸ್ ಅಧೀಕ್ಷಕ;

(iv) ಜಿಲ್ಲೆಯ ಜಿಲ್ಲಾ ಶಸ್ತ್ರ ಚಿಕಿತ್ಸಕ;

(v) ಜಿಲ್ಲಾ ಕೃಷಿ ಅಧಿಕಾರಿ;

(vi) ಜಿಲ್ಲೆಯ ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆಯ ಪ್ರಭಾರೀ ಅಧಿಕಾರಿ;

(vii) ಅಧೀಕ್ಷಕನು ಸಮಿತಿಯ ಪದನಿಮಿತ್ತ ಕಾರ್ಯದರ್ಶಿಯಾಗಿರತಕ್ಕದ್ದು.

(3) ಸರ್ಕಾರವು ನೇಮಕ ಮಾಡಲಾಗತಕ್ಕ ಐವರು ಅಧಿಕಾರೇತರ ಸದಸ್ಯರು ಇರತಕ್ಕದ್ದು.

(4) ವಿಭಾಗಾಧಿಕಾರಿಯು, ಸಂದರ್ಶಕ ಸಮಿತಿಯ ಅಧ್ಯಕ್ಷನಾಗಿರತಕ್ಕದ್ದು. ಸುಧಾರಣಾಧಿಕಾರಿ ಅಥವಾ ಅವನು ನಾಮ ನಿರ್ದೇಶನ ಮಾಡಿದ ವ್ಯಕ್ತಿಯು, ಆಹ್ವಾನದ ಮೇರೆಗೆ ಸಂದರ್ಶಕ ಸಮಿತಿಯ ಯಾವುದೇ ಸಭೆಯಲ್ಲಿ ಭಾಗವಹಿಸಬಹುದು.

(5) ಒಬ್ಬ ಅಧಿಕಾರೇತರ ಸದಸ್ಯನು, ಸಾಮಾನ್ಯವಾಗಿ ಸಮಾಜಕಾರ್ಯದಲ್ಲಿ ಕನಿಷ್ಠ ಐದು ವರ್ಷಗಳ ಅನುಭವ ಹೊಂದಿದವನಾಗಿರಬೇಕು. ಅವನು ಮೂವತ್ತು ವರ್ಷಕ್ಕಿಂತ ಕಡಿಮೆ ಮತ್ತು ಅರವತ್ತು ವರ್ಷಗಳಿಗಿಂತ ಹೆಚ್ಚು ವಯಸ್ಸಿನವನಾಗಿರಕೂಡದು. ಆದಾಗ್ಯೂ, ಸರ್ಕಾರವು ನೇಮಕಾತಿಗೆ ಸೂಕ್ತವೆಂದು ಪರಿಗಣಿಸುವಂಥ ಯಾರೇ ವ್ಯಕ್ತಿಗೆ ಸಂಬಂಧಿಸಿದಂತೆ, ಈ ಉಪನಿಯಮದ ಉಪಬಂಧವನ್ನು ಸಡಿಲಗೊಳಿಸಬಹುದು.

(6) ಪ್ರತಿಯೊಬ್ಬ ಸರ್ಕಾರೇತರ ಸದಸ್ಯನು, ತನ್ನ ನೇಮಕಾತಿಯ ದಿನಾಂಕದಿಂದ ಎರಡು ವರ್ಷಗಳ ಅವಧಿಯವರೆಗೆ ಪದದಲ್ಲಿರತಕ್ಕದ್ದು:

ಪರಂತು, ಒಬ್ಬ ಅಧಿಕಾರೇತರ ಸದಸ್ಯನು, ತನ್ನ ನೇಮಕಾತಿಯ ಅವಧಿಯು ಮುಕ್ತಾಯವಾದ ಮೇಲೆ ಮರು ನೇಮಕಕ್ಕೆ ಅರ್ಹನಾಗಿರತಕ್ಕದ್ದು:

ಮತ್ತೂ ಪರಂತು, ಸರ್ಕಾರವು, ಯಾವುದೇ ಸಮಯದಲ್ಲಿ, ಯಾವುದೇ ಕಾರಣವನ್ನು ಕೊಡದೆ ಯಾರೇ ಸರ್ಕಾರೇತರ ಸದಸ್ಯನ ನೇಮಕಾತಿಯನ್ನು ಅವನ ನೇಮಕಾತಿಯ ಅವಧಿಯ ಮುಕ್ತಾಯಕ್ಕೆ ಮೊದಲೇ ತೆಗೆದುಹಾಕಬಹುದು.

**44. ಸಂದರ್ಶಕ ಸಮಿತಿಯ ಸದಸ್ಯರ ಕರ್ತವ್ಯಗಳು.-** (1) ಈ ಮುಂದಿನವುಗಳು, ಸಂದರ್ಶಕ ಸಮಿತಿ ಸದಸ್ಯರ ಕರ್ತವ್ಯವಾಗಿರತಕ್ಕುದು:-

(ಎ) ಅಧ್ಯಕ್ಷನು, ಸದಸ್ಯರೊಂದಿಗೆ ಸಮಾಲೋಚಿಸಿದ ತರುವಾಯ ರೂಪಿಸುವ ಸರದಿಯ ಪ್ರಕಾರ ಮೂರು ತಿಂಗಳಿಗೊಮ್ಮೆ ಸುಧಾರಕ ವ್ಯವಸ್ಥಾಪನಾ ಕೇಂದ್ರಕ್ಕೆ ಭೇಟಿ ನೀಡುವುದು ಮತ್ತು ಎರಡು ನಿರಂತರ ಸಭೆಗಳ ನಡುವೆ ಮೂರು ತಿಂಗಳನ್ನು ಮೀರದ ಅಂತರವಿರುವಂತೆ ನೋಡಿಕೊಳ್ಳುವುದು;

(ಬಿ) ಸುಧಾರಕ ವ್ಯವಸ್ಥಾಪನಾ ಕೇಂದ್ರದ ಎಲ್ಲ ಭಾಗಗಳನ್ನು ಪರಿಶೀಲನೆ ಮಾಡುವುದು ಮತ್ತು ಅದರಲ್ಲಿ ಇರಿಸಲಾದ ಪ್ರತಿಯೊಬ್ಬ ವ್ಯವಸ್ಥಾಪನೆಗೊಳಗಾದವನಿಗೆ ನೀಡಿದ ತರಬೇತಿಯಿಂದ ಅವನಿಗೆ ಅನುಕೂಲವಾಗಿದೆಯೆ ಎಂಬುದನ್ನು ಕಂಡುಹಿಡಿಯುವ ದೃಷ್ಟಿಯಿಂದ ಅವನನ್ನು ನೋಡುವುದು.

(2) ಈ ಮುಂದಿನವುಗಳು ಸಂದರ್ಶಕ ಸಮಿತಿಯ ಕರ್ತವ್ಯವಾಗಿರತಕ್ಕದ್ದು:-

(ಎ) ಶಿಸ್ತು, ಉದ್ಯೋಗ ಮತ್ತು ವೈದ್ಯಕೀಯ ಶುಶ್ರೂಷೆಗೆ ಸಂಬಂಧಿಸಿದಂತೆ ಅವಶ್ಯ ಕ್ರಮಗಳನ್ನು ಕೈಗೊಳ್ಳಲಾಗುತ್ತಿದೆ ಎಂಬುದನ್ನು ಖಚಿತಪಡಿಸಿಕೊಳ್ಳುವುದು;

(ಬಿ) ಸಮಿತಿಗೆ ಅರ್ಜಿಗಳನ್ನು ಮತ್ತು ದೂರುಗಳನ್ನು ಸಲ್ಲಿಸಲು ಮತ್ತು ಅವುಗಳ ಬಗ್ಗೆ ವಿಚಾರಣೆ ನಡೆಸುವಂತೆ ಮಾಡಲು ಪ್ರತಿಯೊಬ್ಬ ವ್ಯವಸ್ಥಾಪನೆಗೊಳಗಾದವನಿಗೆ ಒಂದು ಅವಕಾಶವನ್ನು ನೀಡುವುದು;

(ಸಿ) ವ್ಯವಸ್ಥಾಪನೆಗೊಳಗಾದವನಿಗೆ ಲೆಕ್ಕಪತ್ರಗಳು ಮತ್ತು ಇತರ ರಿಜಿಸ್ಟರುಗಳು ಮತ್ತು ದಾಖಲೆಗಳನ್ನು ಪರಿಶೀಲಿಸುವುದು;

(ಡಿ) ವ್ಯವಸ್ಥಾಪನೆಗೊಳಗಾದವನ ತರಬೇತಿಯ ಅವಧಿಯು ಮುಕ್ತಾಯವಾಗುವ ಮೊದಲು ಅವನನ್ನು ಬಿಡುಗಡೆ ಮಾಡವುದು ಸೂಕ್ತವೇ ಅಥವಾ ಅಪೇಕ್ಷಣೀಯವೇ ಎಂಬುದನ್ನು ಪರಿಶೀಲಿಸುವುದು ಮತ್ತು ಪರಿಗಣಿಸುವುದು ಹಾಗೂ ಈ ಸಂಬಂಧದಲ್ಲಿ ಸರ್ಕಾರಕ್ಕೆ ಶಿಫಾರಸುಗಳನ್ನು ಮಾಡುವುದು;

(ಇ) ವ್ಯವಸ್ಥಾಪನಾ ಕೇಂದ್ರದ ಪ್ರಗತಿಗೆ ಮತ್ತು ವ್ಯವಸ್ಥಾಪನೆಗೊಳಗಾದವರ ಕ್ಷೇಮಾಭಿವೃದ್ಧಿಗೆ ಸಂಬಂಧಪಟ್ಟ ಯಾವುದೇ ಇತರ ವಿಷಯವನ್ನು ಪರಿಶೀಲಿಸುವುದು.

**45. ಸಂದರ್ಶಕ ಸಮಿತಿಯ ನಡವಳಿಗಳು.-** ಸಂದರ್ಶಕ ಸಮಿತಿಯ ಪ್ರತಿಯೊಂದು ಸಭೆಯ ನಡವಳಿಗಳ ಒಂದು ಪ್ರತಿಯನ್ನು ಮತ್ತು ಸಂದರ್ಶಕ ಸಮಿತಿಯ ಸದಸ್ಯರು, ಸಂದರ್ಶನ ನೀಡಿದ ಸಮಯದಲ್ಲಿ ಅವರು ದಾಖಲು ಮಾಡಿದ ಷರಾಗಳನ್ನೂ ಸಹ ಅಧೀಕ್ಷಕನು ವಿವರಣೆಯಲ್ಲಿ ನೀಡಲು ಇಚ್ಛಿಸಬಹುದಾದಂಥ ಷರಾಗಳೊಂದಿಗೆ ಅಥವಾ ಅನ್ಯಥಾ ಸುಧಾರಣಾಧಿಕಾರಿಗೆ ಸಲ್ಲಿಸತಕ್ಕದ್ದು ಮತ್ತು ಆನಂತರ ಸುಧಾರಣಾಧಿಕಾರಿಯು ತಾನು ಅವಶ್ಯವೆಂದು ಭಾವಿಸಬಹುದಾದಂಥ ಆದೇಶಗಳನ್ನು ಹೊರಡಿಸತಕ್ಕದ್ದು. ಅಧೀಕ್ಷಕನು ಅಂಥ ಆದೇಶಗಳ ಒಂದು ಪ್ರತಿಯನ್ನು, ಸಮಿತಿಯ ತ್ರೈಮಾಸಿಕ ಸಭೆಯ ಮುಂದೆ ಮಂಡಿಸತಕ್ಕದ್ದು ಅಥವಾ ಸಂದರ್ಭಾನುಸಾರ, ಷರಾಗಳನ್ನು ಮಾಡುವ ಸದಸ್ಯರಿಗೆ ಅದನ್ನು ಕಳುಹಿಸತಕ್ಕದ್ದು.

**46. ಚಲನವಲನಗಳನ್ನು ನಿರ್ಬಂಧಿಸಲಾಗಿರುವ ಎಲ್ಲ ವ್ಯಕ್ತಿಗಳ ಪ್ರಕರಣಗಳ ಪುನರೀಕ್ಷಣೆ.-** (1) ಈ ಅಧಿನಿಯಮದ ಅಡಿಯಲ್ಲಿ ಚಲನವಲನಗಳನ್ನು ನಿರ್ಬಂಧಿಸಲಾದ ಎಲ್ಲ ವ್ಯಕ್ತಿಗಳ ಪ್ರಕರಣಗಳನ್ನು ಜಿಲ್ಲೆಯ ಜಿಲ್ಲಾ ಮ್ಯಾಜಿಸ್ಟ್ರೇಟ್, ಸಹಾಯಕ ಸುಧಾರಣಾಧಿಕಾರಿ ಮತ್ತು ಪೊಲೀಸ್ ಅಧೀಕ್ಷಕರನ್ನು ಒಳಗೊಂಡ ಮಂಡಳಿಯು ಪ್ರತಿ ಆರು ತಿಂಗಳಿಗೊಮ್ಮೆ ಪುನರೀಕ್ಷಣೆ ಮಾಡತಕ್ಕದ್ದು. ಜಿಲ್ಲಾ ಮ್ಯಾಜಿಸ್ಟ್ರೇಟನು ಮಂಡಳಿಯ ಅಧ್ಯಕ್ಷನಾಗಿರತಕ್ಕದ್ದು ಮತ್ತು ಪೊಲೀಸ್ ಅಧೀಕ್ಷಕನು ಪದನಿಮಿತ್ತ ಕಾರ್ಯದರ್ಶಿಯಾಗಿರತಕ್ಕದ್ದು.

(2) ಮಂಡಳಿಯು, ಚಲನವಲನ ನಿರ್ಬಂಧದ ಆದೇಶವನ್ನು ಅಂಥ ಆದೇಶದಲ್ಲಿ ನಿರ್ದಿಷ್ಟಪಡಿಸಿದ ಅವಧಿಯ ಮುಕ್ತಾಯದ ಮೊದಲು ರದ್ದುಗೊಳಿಸುವುದು ಸೂಕ್ತವೆಂದು ಅಥವಾ ಅಪೇಕ್ಷಣೀಯವೆಂದು ಪರಿಗಣಿಸಿದರೆ, ಅದು ಈ ಸಂಬಂಧದಲ್ಲಿ ಸರ್ಕಾರಕ್ಕೆ ಶಿಫಾರಸು ಮಾಡಬಹುದು.

## ಅಧ್ಯಾಯ -V

### ಪ್ರಮಾಣಿತ ಸಂಸ್ಥೆಗಳನ್ನು ಸುಧಾರಕ ವ್ಯವಸ್ಥಾಪನಾ ಕೇಂದ್ರಗಳನ್ನಾಗಿ ಅನುಮೋದಿಸುವುದು ಹಾಗೂ ಅವುಗಳ ನಿರ್ವಹಣೆ ಮತ್ತು ನಿಯಂತ್ರಣ.

**47. ಸುಧಾರಕ ವ್ಯವಸ್ಥಾಪನಾ ಕೇಂದ್ರವಾಗಿ ಪ್ರಮಾಣೀಕರಿಸಲು ಕಾರ್ಯವಿಧಾನ.-** ಕರ್ನಾಟಕ ಸಂಘಗಳ ನೋಂದಣಿ ಅಧಿನಿಯಮ, 1960 ರ (1960ರ ಕರ್ನಾಟಕ ಅಧಿನಿಯಮ 17) ಅಡಿಯಲ್ಲಿ ನೋಂದಾಯಿಸಲಾದ ಮತ್ತು ಅಧಿನಿಯಮದ 13ನೇ ಪ್ರಕರಣದ (2)ನೇ ಉಪಪ್ರಕರಣದ ಅಡಿಯಲ್ಲಿ ಪ್ರಮಾಣೀಕರಿಸಿಲ್ಲದ ಯಾವುದೇ ಸಂಸ್ಥೆಯು, ಅದನ್ನು ಒಂದು ಸುಧಾರಕ ವ್ಯವಸ್ಥಾಪನಾ ಕೇಂದ್ರವಾಗಿ ಪ್ರಮಾಣೀಕರಿಸಬೇಕೆಂದು ಇಚ್ಛಿಸಿದರೆ, ಅದು, ಅದರ ವ್ಯವಸ್ಥಾಪಕ ಅಥವಾ ಇತರ ಸಕ್ಷಮ ಪ್ರಾಧಿಕಾರಿಯ ಮೂಲಕ ಈ ಸಂಬಂಧದಲ್ಲಿ ಒಂದು ಲಿಖಿತ ಅರ್ಜಿಯನ್ನು ಸುಧಾರಣಾಧಿಕಾರಿಗೆ ಸಲ್ಲಿಸತಕ್ಕದ್ದು. ಅವರು, ಸದರಿ ಸಂಸ್ಥೆಯನ್ನು ಪರಿಶೀಲಿಸುವಂತೆ ಮಾಡತಕ್ಕದ್ದು. ಮತ್ತು ಊಟ-ವಸತಿ, ಕುಶಲಕೆಲಸಗಳಲ್ಲಿ ತರಬೇತಿ, ಉದ್ಯೋಗ, ಮನರಂಜನೆ, ವೈದ್ಯಕೀಯ ಮತ್ತು ವ್ಯವಸ್ಥಾಪನೆಗೊಳಗಾದವನ ಪುನರ್ವಸತಿ ಸೌಲಭ್ಯಗಳ ಕುರಿತಂತೆ ವ್ಯವಸ್ಥಾಪನಾ ಕೇಂದ್ರದಲ್ಲಿ ಮಾಡಿದ ಏರ್ಪಾಡುಗಳ ಬಗ್ಗೆ ಅವನಿಗೆ ತೃಪ್ತಿಕರವೆನಿಸಿದರೆ, ಅವನು, ಸರ್ಕಾರಕ್ಕೆ ಒಂದು ವರದಿ ಸಲ್ಲಿಸತಕ್ಕದ್ದು.

**48. ಪ್ರಮಾಣಿತ ಸುಧಾರಕ ವ್ಯವಸ್ಥಾಪನಾ ಕೇಂದ್ರವು ಆಡಳಿತ ಮಂಡಲಿಯನ್ನು ಹೊಂದಿರುವುದು.-** 13ನೇ ಪ್ರಕರಣದ (2)ನೇ ಉಪಪ್ರಕರಣದ ಅಡಿಯಲ್ಲಿ ಒಂದು ಸುಧಾರಕ ವ್ಯವಸ್ಥಾಪನಾ ಕೇಂದ್ರವು ಪ್ರಮಾಣೀಕೃತವೆಂದು ಇಚ್ಛಿಸುವ ಪ್ರತಿಯೊಂದು ಸಂಸ್ಥೆಯು, ಸಂಸ್ಥೆಯ ದೈನಂದಿನ ನಿರ್ವಹಣೆಗಾಗಿ ಒಬ್ಬ ಗೌರವ ಕಾರ್ಯದರ್ಶಿ ಇರುವ ಒಂದು ಆಡಳಿತ ಮಂಡಲಿಯನ್ನು ಹೊಂದಿರತಕ್ಕದ್ದು. ಅವನು, ಆಡಳಿತ ಮಂಡಲಿಯ ನಿಯಂತ್ರಣಕ್ಕೊಳಪಟ್ಟು ಅದರ ಕಾರ್ಯನಿರ್ವಾಹಕ ಮತ್ತು ಆಡಳಿತಾತ್ಮಕ ಪ್ರಕಾರ್ಯಗಳನ್ನು ನಿರ್ವಹಿಸತಕ್ಕದ್ದು.

**49. ಸುಧಾರಣಾಧಿಕಾರಿಯ ಕರ್ತವ್ಯಗಳು.-** ಸುಧಾರಣಾಧಿಕಾರಿಯು, ಸರ್ಕಾರದ ಸಾಮಾನ್ಯ ನಿಯಂತ್ರಣಕ್ಕೊಳಪಟ್ಟು, ವ್ಯವಸ್ಥಾಪನೆಗೊಳಗಾದವರಿಗೆ ಸಂಬಂಧಿಸಿದಂತೆ ಸುಧಾರಕ ವ್ಯವಸ್ಥಾಪನಾ ಕೇಂದ್ರದ ಅಧೀಕ್ಷಕನು ಇಟ್ಟುಕೊಂಡುಬರಬೇಕಾದ ಅವಶ್ಯಕ ರಿಜಿಸ್ಟರುಗಳನ್ನು ಮತ್ತು ದಾಖಲೆಗಳನ್ನು ನಿಯಮಿಸತಕ್ಕದ್ದು.

**50. ಸುಧಾರಕ ವ್ಯವಸ್ಥಾಪನಾ ಕೇಂದ್ರದ ಪ್ರಭಾರ ಹೊಂದಿರುವ ಅಧೀಕ್ಷಕನ ಕರ್ತವ್ಯಗಳು ಮತ್ತು ಹೊಣೆಗಾರಿಕೆಗಳು.-** 13ನೇ ಪ್ರಕರಣದ (2)ನೇ ಉಪಪ್ರಕರಣದ ಅಡಿಯಲ್ಲಿ ಪ್ರತಿಯೊಂದು ಪ್ರಮಾಣಿತ ಸುಧಾರಕ ವ್ಯವಸ್ಥಾಪನಾ ಕೇಂದ್ರವು ಸರ್ಕಾರದಿಂದ ಪ್ರತಿಯೋಜಿತನಾದ ಅಧೀಕ್ಷಕನನ್ನು ಹೊಂದಿರತಕ್ಕದ್ದು ಮತ್ತು ಅವನ ಕರ್ತವ್ಯಗಳು ಹಾಗೂ ಹೊಣೆಗಾರಿಕೆಗಳು, 13ನೇ ಪ್ರಕರಣದ (1)ನೇ ಉಪಪ್ರಕರಣದ ಪ್ರಕಾರ ಸರ್ಕಾರದಿಂದ ಸ್ಥಾಪಿತವಾದ ಸುಧಾರಕ ವ್ಯವಸ್ಥಾಪನಾ ಕೇಂದ್ರದ ಅಧೀಕ್ಷಕನ ಕರ್ತವ್ಯಗಳು ಮತ್ತು ಹೊಣೆಗಾರಿಕೆಗಳಂತೆಯೇ ಇರತಕ್ಕದ್ದು.

**51. ಪ್ರಮಾಣಿತ ಸುಧಾರಕ ವ್ಯವಸ್ತಾಪನಾ ಕೇಂದ್ರದ ನಿಯಂತ್ರಣ.-** ಪ್ರಮಾಣಿತ ಸುಧಾರಕ ವ್ಯವಸ್ತಾಪನಾ ಕೇಂದ್ರವು ಸುಧಾರಣಾಧಿಕಾರಿಯ ಸಾಮಾನ್ಯ ನಿಯಂತ್ರಣದಲ್ಲಿರತಕ್ಕದ್ದು ಮತ್ತು ಅದನ್ನು ಸುಧಾರಣಾಧಿಕಾರಿ ಅಥವಾ ಸಹಾಯಕ ಸುಧಾರಣಾಧಿಕಾರಿಯು ಪ್ರತಿ ಆರು ತಿಂಗಳಿಗೆ ಒಂದು ಬಾರಿಗೆ ಕಡಿಮೆಯಾಗದಂತೆ ಮತ್ತು ಅವಶ್ಯವೆಂದು ಕಂಡುಬರುವಷ್ಟು ಬಾರಿ ಪರಿಶೀಲನೆ ನಡೆಸತಕ್ಕದ್ದು.

**52. ಪ್ರಮಾಣಿತ ಸುಧಾರಕ ವ್ಯವಸ್ಥಾಪನಾ ಕೇಂದ್ರದಲ್ಲಿ ಪ್ರತ್ಯೇಕ ವಿಭಾಗ.-** ಪ್ರತಿಯೊಂದು ಪ್ರಮಾಣಿತ ವ್ಯವಸ್ಥಾಪನಾ ಕೇಂದ್ರದಲ್ಲಿ,-

(1) ವ್ಯವಸ್ಥಾಪನೆಗೊಳಗಾದ ಒಂಟಿ ಪುರುಷರಿಗೆ;

(2) ವ್ಯವಸ್ಥಾಪನೆಗೊಳಗಾದ ಒಂಟು ಮಹಿಳೆಯರಿಗೆ;

(3) ಒಂದೇ ಕುಟುಂಬಕ್ಕೆ ಸೇರಿದ ವ್ಯವಸ್ಥಾಪನೆಗೊಳಗಾದವರಿಗೆ;

(4) ಅಂಥ ವ್ಯವಸ್ಥಾಪನಾ ಕೇಂದ್ರದಲ್ಲಿ ಸಂದರ್ಭಾನುಸಾರ, ಅವರ ಹೆಂಡತಿಯರ/ಗಂಡಂದಿರ ಜೊತೆ ವಾಸವಾಗಿರುವ ವ್ಯವಸ್ಥಾಪನೆಗೊಳಗಾದ ವಿವಾಹಿತರಿಗೆ

- ಪ್ರತ್ಯೇಕ ವಿಭಾಗಗಳನ್ನು ಒದಗಿಸತಕ್ಕದ್ದು.

**53. ಪ್ರಮಾಣಿತ ಸುಧಾರಕ ವ್ಯವಸ್ಥಾಪನಾ ಕೇಂದ್ರಗಳಿಗೆ ಸಂದರ್ಶಕ ಸಮಿತಿ.–** ಪ್ರತಿಯೊಂದು ಪ್ರಮಾಣಿತ ಸುಧಾರಕ ವ್ಯವಸ್ಥಾಪನಾ ಕೇಂದ್ರಕ್ಕೆ 43ನೇ ನಿಯಮದ (2) ರಿಂದ (6) ರವರೆಗಿನ ಉಪನಿಯಮಗಳಲ್ಲಿ ಉಪಬಂಧಿಸಲಾದಂತೆ ಪದನಿಮಿತ್ತ ಸದಸ್ಯರುಗಳು ಮತ್ತು ಅಧಿಕಾರೇತರ ಸದಸ್ಯರುಗಳನ್ನೊಳಗೊಂಡ ಒಂದು ಸಂದರ್ಶಕ ಸಮಿತಿ ಇರತಕ್ಕದ್ದು ಮತ್ತು ಸಂದರ್ಶಕ ಸಮಿತಿಯ ಕರ್ತವ್ಯಗಳು ಮತ್ತು ಹೊಣೆಗಾರಿಕೆಗಳು 44 ಮತ್ತು 45ನೇ ನಿಯಮಗಳಲ್ಲಿ ಉಪಬಂಧಿಸಿರುವ ರೀತಿಯಲ್ಲಿರುವಂತೆಯೇ ಇರತಕ್ಕದ್ದು. ಗೌರವ ಕಾರ್ಯದರ್ಶಿ ಮತ್ತು ಆಡಳಿತ ನಿಕಾಯದ ಒಬ್ಬ ಅಥವಾ ಇಬ್ಬರು ಸದಸ್ಯರುಗಳನ್ನು ಸಂದರ್ಶಕ ಸಮಿತಿಯ ಅಧಿಕಾರೇತರ ಸದಸ್ಯರನ್ನಾಗಿ ಸೇರಿಸಿಕೊಳ್ಳತಕ್ಕದ್ದು.

**54. ದಂಡಗಳು.–** ನೋಂದಾಯಿತ ಅಪರಾಧಿಯಾಗಿರುವ ಯಾರೇ ಆದರೂ ಅಥವಾ ಯಾರ ವಿರುದ್ಧ ಚಲನವಲನದ ನಿರ್ಬಂಧದ ಆದೇಶವನ್ನು ಹೊರಡಿಸಲಾಗಿದೆಯೋ ಆ ವ್ಯಕ್ತಿಯು ಅಥವಾ ಈ ನಿಯಮಗಳಲ್ಲಿ ಯಾವುದನ್ನಾದರೂ ಉಲ್ಲಂಘಿಸುವ ವ್ಯವಸ್ಥಾಪನೆಗೊಳಗಾದವನು, ಅಪರಾಧವು ಸಿದ್ಧವಾದ ಮೇಲೆ, ಆರು ತಿಂಗಳುಗಳವರೆಗೆ ವಿಸ್ತರಿಸಬಹುದಾದ ಕಾರಾವಾಸ ಅಥವಾ ಒಂದು ನೂರು ರೂಪಾಯಿಗಳವರೆಗೆ ವಿಸ್ತರಿಸಬಹುದಾದ ದಂಡ ಅಥವಾ ಅವೆರಡರಿಂದಲೂ ದಂಡನೀಯನಾಗತಕ್ಕದ್ದು.

**55. ನಿರಸನ ಮತ್ತು ಉಳಿಸುವಿಕೆಗಳು.–** 22ನೇ ಪ್ರಕರಣದಿಂದ ನಿರಸನಗೊಂಡ ಯಾವುದೇ ಅಧಿನಿಯಮಿತಿಗಳ ಅಡಿಯಲ್ಲಿ ರಚಿಸಲಾದ ಹಿಂದೆ ಹೇಳಿದ ನಿಯಮಗಳಿಗೆ ಸಂವಾದಿಯಾದ ಎಲ್ಲ ನಿಯಮಗಳನ್ನು ಈ ಮೂಲಕ ನಿರಸನಗೊಳಿಸಲಾಗಿದೆ:

ಪರಂತು ಆ ನಿರಸನವು,-

(ಎ) ಹಾಗೆ ನಿರಸನಗೊಂಡ ನಿಯಮಗಳಿಗೆ ಸಂಬಂಧಿಸಿದ ಹಿಂದಿನ ಕಾರ್ಯಾಚರಣೆಯನ್ನು ಅಥವಾ ಅದರ ಅಡಿಯಲ್ಲಿ ಯುಕ್ತವಾಗಿ ಮಾಡಲಾದ ಅಥವಾ ಬಾಧಿತವಾದ ಯಾವುದೇ ಕಾರ್ಯವನ್ನು, ಅಥವಾ

(ಬಿ) ಹಾಗೆ ನಿರಸನಗೊಂಡ ಯಾವುವೇ ನಿಯಮಗಳ ಅಡಿಯಲ್ಲಿ ಆರ್ಜಿಸಿದ, ಪ್ರಾಪ್ತವಾದ ಅಥವಾ ಭರಿಸಿದ ಯಾವುದೇ ಹಕ್ಕು, ವಿಶೇಷಾಧಿಕಾರ, ಬಾಧ್ಯತೆ, ಅಥವಾ ಹೊಣೆಗಾರಿಕೆಯನ್ನು, ಅಥವಾ

(ಸಿ) ಹಾಗೆ ನಿರಸಿತವಾದ ಯಾವುದೇ ನಿಯಮದ ವಿರುದ್ಧ ಮಾಡಲಾದ ಯಾವುವೇ ಅಪರಾಧಗಳ ಸಂಬಂಧದಲ್ಲಿ ಭರಿಸಲಾದ ಯಾವುದೇ ದಂಡ, ಮುಟ್ಟುಗೋಲು ಅಥವಾ ಶಿಕ್ಷೆಯನ್ನು, ಅಥವಾ

(ಡಿ) ಮೇಲೆ ಹೇಳಲಾದ ಅಂಥ ಯಾವುದೇ ಹಕ್ಕು, ವಿಶೇಷಾಧಿಕಾರ, ಬಾಧ್ಯತೆ, ಹೊಣೆಗಾರಿಕೆ, ದಂಡ, ಮುಟ್ಟುಗೋಲು ಅಥವಾ ಶಿಕ್ಷೆಯ ಸಂಬಂಧದಲ್ಲಿ ಯಾವುದೇ ತನಿಖೆಯನ್ನು ಅಥವಾ ಕಾನೂನು ವ್ಯವಹರಣೆಗಳನ್ನು ಅಥವಾ ಪರಿಹಾರೋಪಾಯವನ್ನು ಬಾಧಿಸತಕ್ಕದ್ದಲ್ಲ ಮತ್ತು ಅಂಥ ನಿಯಮಗಳನ್ನು ನಿರಸಿತಗೊಳಿಸಿಲ್ಲದಿದ್ದರೆ ಹೇಗೋಹಾಗೆ ಅಂಥ ಯಾವುದೇ ತನಿಖೆ, ಕಾನೂನು ವ್ಯವಹರಣೆ ಅಥವಾ ಪರಿಹಾರೋಪಾಯವನ್ನು ಹೂಡಬಹುದು, ಮುಂದುವರಿಸಬಹುದು ಅಥವಾ ಜಾರಿಗೊಳಿಸಬಹುದು ಮತ್ತು ಅಂಥ ಯಾವುದೇ ದಂಡ, ಮುಟ್ಟುಗೋಲು ಅಥವಾ ಶಿಕ್ಷೆಯನ್ನು ವಿಧಿಸಬಹುದು:

ಮತ್ತೂ ಪರಂತು, ಹಿಂದಿನ ಪರಂತುಕಕ್ಕೆ ಒಳಪಟ್ಟು ಮಾಡಲಾದ ಯಾವುದೇ ಕಾರ್ಯ ಅಥವಾ ಕೈಕೊಂಡ ಯಾವುದೇ ಕ್ರಮವನ್ನು (ಅಂಥ ಯಾವುದೇ ನಿಯಮದ ಅಡಿಯಲ್ಲಿ ಮಾಡಲಾದ ಯಾವುದೇ ನೇಮಕಾತಿ ಅಥವಾ ಪ್ರತ್ಯಾಯೋಜನೆ, ಹೊರಡಿಸಲಾದ ಅಧಿಸೂಚನೆ, ಆದೇಶ, ಸೂಚನೆಗಳು ಅಥವಾ ನಿರ್ದೇಶನಗಳು, ಪಡೆಯಲಾದ ಪ್ರಮಾಣಪತ್ರಗಳ ನಮೂನೆ, ನೀಡಲಾದ ಅನುಮತಿಪತ್ರ ಅಥವಾ ಅಪ್ಪಣೆಚೀಟಿ ಅಥವಾ ಲೈಸೆನ್ಸ್ ಅಥವಾ ಪರಿಣಾಮಕಾರಿಯಾದ ನೋಂದಣಿಯೂ ಸೇರಿದಂತೆ) ಈ ನಿಯಮಗಳ ಸಂವಾದಿ ಉಪಬಂಧಗಳ ಅಡಿಯಲ್ಲಿ ಮಾಡಲಾದುದೆಂದು ಅಥವಾ ಕೈಗೊಳ್ಳಲಾದುದೆಂದು ಭಾವಿಸತಕ್ಕದ್ದು ಮತ್ತು ಸಂದರ್ಭಾನುಸಾರ, ಅಧಿನಿಯಮದ ಅಥವಾ ಈ ನಿಯಮಗಳ ಅಡಿ ಮಾಡಲಾದ ಯಾವುದೇ ಕಾರ್ಯದಿಂದ ಅಥವಾ ಕೈಗೊಳ್ಳಲಾದ ಯಾವುದೇ ಕ್ರಮದಿಂದ ರದ್ದುಗೊಳ್ಳದ ಹೊರತು ಮತ್ತು ಆವರೆಗೆ ತದನುಸಾರವಾಗಿ ಜಾರಿಯಲ್ಲಿರುವುದು ಮುಂದುವರಿಯತಕ್ಕದ್ದು.

ನಮೂನೆ-ಎ

(3ನೇ ನಿಯಮವನ್ನು ನೋಡಿ)

ಮೈಸೂರು ರೂಢಿಗತ ಅಪರಾಧಿಗಳ ಅಧಿನಿಯಮ,1961ರ ಅಡಿಯಲ್ಲಿ ರೂಢಿಗತ ಅಪರಾಧಿಗಳ ರಿಜಿಸ್ಟರು

(ರಿಜಿಸ್ಟರನ್ನು ಇಟ್ಟುಕೊಂಡು ಬರುವ ಅಧಿಕಾರಿಯು ನಮೂದಿಸಬೇಕಾದುದು)

| | | |
|---|---|---|
| ಕ್ರ.ಸಂ | : | |
| ಜಾತಿ | : | |
| ಉಪಜಾತಿ | : | |
| ನೋಂದಣಿಯ ಆದೇಶದ ಸಂಖ್ಯೆ ಮತ್ತು ದಿನಾಂಕ | : | |
| (i) ರೂಢಿಗತ ಅಪರಾಧಿಯ ಹೆಸರು ಮತ್ತು<br>ಉಪನಾಮ, ತಂದೆಯ /ಗಂಡನ ಹೆಸರು | :<br>: | |
| (ii) ಆದೇಶದ ದಿನಾಂಕದಂದು ಇದ್ದ ನಿವಾಸ<br>ಗ್ರಾಮ<br>ಪೊಲೀಸ್ ಠಾಣೆ<br>ಜಿಲ್ಲೆ. | :<br>:<br>: | |
| (iii) ಮೂಲ ಸ್ಥಳ<br>ಗ್ರಾಮ<br>ಪೊಲೀಸ್ ಠಾಣೆ<br>ಜಿಲ್ಲೆ. | :<br>:<br>: | |
| (iv) ಉದ್ದೇಶಿತ ವಾಸ ಸ್ಥಳ<br>ಗ್ರಾಮ,<br>ಪೊಲೀಸ್ ಠಾಣೆ,<br>ಜಿಲ್ಲೆ | :<br>:<br>: | |
| (v) ವಿವರಣಾತ್ಮಕ ಪಟ್ಟಿ<br>ವಯಸ್ಸು<br>ಎತ್ತರ<br>ಗುರುತು ಚಿಹ್ನೆ | :<br>:<br>:<br>: | |
| (vi) (ಎ) ಚಲನವಲನಗಳನ್ನು ನಿರ್ಬಂಧಿಸಲಾದ ಪ್ರದೇಶ<br>ಗ್ರಾಮ<br>ಪೊಲೀಸ್ ಠಾಣೆ<br>ಜಿಲ್ಲೆ.<br>(ಬಿ) ಹಾಜರಾಗಬೇಕಾದ ರೀತಿ | :<br>:<br>:<br><br>: | |
| (vii) ರೂಢಿಗತ ಅಪರಾಧಿಯ<br>ಎಡಗೈ ಹೆಬ್ಬೆಟ್ಟಿನ ಮುದ್ರೆ. | | |
| (viii) ರಿಜಿಸ್ಟರನ್ನು ಇಟ್ಟುಕೊಂಡುಬರುವ ಅಧಿಕಾರಿಯ ಸಹಿ,<br>ಪದನಾಮ ಮತ್ತು ದಿನಾಂಕ | | |
| (ix) ರಿಜಿಸ್ಟರನ್ನು ಜಿಲ್ಲಾ ಮ್ಯಾಜಿಸ್ಟ್ರೇಟ್/<br>ಪೊಲೀಸ್ ಆಯುಕ್ತ /ಪೊಲೀಸ್ ಅಧೀಕ್ಷಕ<br>ಇವರ ಮುಂದೆ ಮಂಡಿಸಬೇಕಾದ ದಿನಾಂಕ | | |
| (x) ರಿಜಿಸ್ಟರಿನ ಪ್ರಭಾರ ಹೊಂದಿರುವ ಅಧಿಕಾರಿಯ ಸಹಿ,<br>ಪದನಾಮ ಮತ್ತು ದಿನಾಂಕ (ನಮೂದುಗಳನ್ನು<br>ಜಿಲ್ಲಾ ಮ್ಯಾಜಿಸ್ಟ್ರೇಟ್, (ಪೊಲೀಸ್ ಆಯುಕ್ತ /ಪೊಲೀಸ್<br>ಅಧೀಕ್ಷಕನು ಮಾಡಬೇಕು)<br>ಬೆರಳು ಮುದ್ರೆಗಳ ಕಾಗದದ ಹಾಳೆಗಳನ್ನು ಬ್ಯೂರೋಗೆ ಕಳುಹಿಸಿದ<br>ಪ್ರತಿ ಪೊಲೀಸ್ ಠಾಣೆಗೆ ಅನುಸಾರವಾದ ಕ್ರಮ ಸಂಖ್ಯೆ<br>ಬೆರಳ ಮುದ್ರೆ - ವರ್ಗೀಕರಣ | | |

ಅಪರಾಧ ನಿರ್ಣಯಗಳು
(ನೋಂದಾವಣಿಗೆ ಮೊದಲು ಅಪರಾಧ ನಿರ್ಣಯಗಳನ್ನು ಕೆಂಪುಶಾಯಿಯಲ್ಲಿ ತೋರಿಸಬೇಕು)

| ಸಂಖ್ಯೆ | ಯಾವುದಕ್ಕಾಗಿ ಅಪರಾಧಿಯೆಂದು ನಿರ್ಣೀತನಾಗಿದ್ದಾನೆ | ಜಿಲ್ಲೆ ಮತ್ತು ನ್ಯಾಯಾಲಯ | ದಿನಾಂಕ | ಪ್ರಕರಣ | ಶಿಕ್ಷೆ | ಬಂಧಿಸಿಡಲಾದ ಜೈಲಿನ ಹೆಸರು ಮತ್ತು ಜೈಲು ರಿಜಿಸ್ಟರಿನ ಸಂಖ್ಯೆ |
|---|---|---|---|---|---|---|
| 1 | 2 | 3 | 4 | 5 | 6 | 7 |

## ನಮೂನೆ-ಬಿ
## (4ನೇ ನಿಯಮವನ್ನು ನೋಡಿ)
## ರೂಢಿಗತ ಅಪರಾಧಿಯು ಖುದ್ದಾಗಿ ಹಾಜರಾಗಲು ನೋಟೀಸು

ಇವರಿಗೆ,

(ಹೆಸರು ಮತ್ತು ವಾಸಸ್ಥಳದ ವಿವರಣೆ)

ಕರ್ನಾಟಕ ಸರ್ಕಾರವು ರೂಢಿಗತ ಅಪರಾಧಿಯ ರಿಜಿಸ್ಟರನ್ನು ಇಟ್ಟುಕೊಂಡು ಬರಲು ನಿರ್ದೇಶಿಸಿರುವುದರಿಂದಾಗಿ;

ನೀವು ಒಬ್ಬ ರೂಢಿಗತ ಅಪರಾಧಿಯಾಗಿರುವುದರಿಂದ, ಜಿಲ್ಲಾ ಮ್ಯಾಜಿಸ್ಟ್ರೇಟ್‌ನಾದ/ ಜಿಲ್ಲಾ ಮ್ಯಾಜಿಸ್ಟ್ರೇಟನಿಂದ ನೇಮಕವಾಗಿರುವ ಅಧಿಕಾರಿಯಾದ............ ಎಂಬ ನಾನು,

ಈಗ, ಅಧಿನಿಯಮದ 4ನೇ ಪ್ರಕರಣದಿಂದ ಪ್ರದತ್ತವಾದ ಅಧಿಕಾರಗಳನ್ನು ಚಲಾಯಿಸಿ; ನೀವು:

(ಎ) ............ದಿನಾಂಕದಂದು...........ಗಂಟೆಗೆ ಖುದ್ದಾಗಿ ನನ್ನ ಮುಂದೆ ಹಾಜರಾಗುವಂತೆ;

(ಬಿ) ಈ ಮುಂದಿನ ಮಾಹಿತಿಯನ್ನು ಒದಗಿಸುವಂತೆ;
(ಅಗತ್ಯವಿರುವ ವಿವರಗಳನ್ನು ಇಲ್ಲಿ ಸೇರಿಸಿ)

(ಸಿ) ನಿಮ್ಮ ಬೆರಳು ಮತ್ತು ಅಂಗೈ ಮುದ್ರೆಗಳನ್ನು ತೆಗೆದುಕೊಳ್ಳಲು ಅನುಮತಿಸುವಂತೆ;
- ಕರೆ ನೀಡಿದ್ದೇನೆ.

ರೂಢಿಗತ ಅಪರಾಧಿಗಳ ರಿಜಿಸ್ಟರಿನಲ್ಲಿ ನಮೂದನ್ನು ಮಾಡುವ ಉದ್ದೇಶಗಳಿಗಾಗಿ ಪಾದದ ಗುರುತುಗಳನ್ನು ಮತ್ತು ಛಾಯಾಚಿತ್ರಗಳನ್ನು ತೆಗೆದುಕೊಳ್ಳಲಾಗುವುದು ಮತ್ತು ಸದರಿ ರಿಜಿಸ್ಟರಿನಲ್ಲಿ ಅಂತ ನಮೂದುಗಳನ್ನು ಏಕೆ ಮಾಡಬಾರದು ಎಂಬುದಕ್ಕೆ ನೀವು ಕಾರಣ ತೋರಿಸುವುದು.

ದಿನಾಂಕ:..........

ಜಿಲ್ಲಾ ಮ್ಯಾಜಿಸ್ಟ್ರೇಟ್/
ಜಿಲ್ಲಾ ಮ್ಯಾಜಿಸ್ಟ್ರೇಟನು ನೇಮಕ ಮಾಡಿರುವ ಅಧಿಕಾರಿ.

## ನಮೂನೆ-ಸಿ

(10 (4)ನೇ ನಿಯಮವನ್ನು ನೋಡಿ)

## ತಾತ್ಕಾಲಿಕ ಗೈರುಹಾಜರಿ ನಮೂನೆ

ಅವನ/ಅವಳ ವಾಸಸ್ಥಳದಿಂದ ತಾತ್ಕಾಲಿಕವಾಗಿ ಗೈರುಹಾಜರಾಗುವ ಉದ್ದೇಶವನ್ನು ಸೂಚಿಸಿರುವ ಮತ್ತು ಗ್ರಾಮದಲ್ಲಿ ವಾಸಿಸುವ --------- (ಹೆಸರು) ---------ರ ಮಗ/ಹೆಂಡತಿ ---------ಜಾತಿ, ರಿಜಿಸ್ಟರ್ ಸಂಖ್ಯೆಯ---------ಇವರಿಗೆ ಇವನ್ನು ನೀಡಲಾಗಿದೆ. ಅವನು/ಅವಳು ಸಂದರ್ಶಿಸಲು ಉದ್ದೇಶಿಸಿರುವ ಸ್ಥಳ ಅಥವಾ ಸ್ಥಳಗಳು ಮತ್ತು ಅವನು/ಅವಳು ಯಾರೊಂದಿಗೆ ಇರುತ್ತಾನೋ/ ಇರುತ್ತಾಳೋ ಆ ವ್ಯಕ್ತಿಗಳು.

| ಸ್ಥಳ | ಸಂಭಾವ್ಯ ದಿನಾಂಕ | ಅವನ/ಅವಳ ಜೊತೆಯಲ್ಲಿ ಇರುವ ವ್ಯಕ್ತಿಗಳು ಅಥವಾ ಇರುವ ಸ್ಥಳ | ಸಂಭಾವ್ಯಅವಧಿ |
|---|---|---|---|

ವಯಸ್ಸು ಮತ್ತು ಗುರುತು ಚಿಹ್ನೆ
ಮತ್ತು ಹೆಬ್ಬೆರಳ ಮುದ್ರೆ,
ಪೊಲೀಸ್ ಠಾಣೆಯ ಹೆಸರು:ಗ್ರಾಮ,
ನೀಡಿದ ದಿನಾಂಕ

ಪೊಲೀಸ್ ಠಾಣೆಯ ಪ್ರಭಾರೀ
ಅಧಿಕಾರಿಯ ಅಥವಾ ನಮೂನೆಯನ್ನು
ನೀಡುವ ಗ್ರಾಮದ ಪೊಲೀಸ್
ಪಟೇಲನ ಸಹಿ.

## ನಮೂನೆ -ಡಿ

(12ನೇ ನಿಯಮವನ್ನು ನೋಡಿ)

**ಒಂದು ಪ್ರದೇಶದಿಂದ ಗೈರುಹಾಜರಾಗಲು ಅನುಮತಿಸಲಾದ ನಿರ್ಬಂಧಿತ ವ್ಯಕ್ತಿಗೆ ನೀಡಬೇಕಾದ ಅಪ್ಪಣೆ ಚೀಟಿ.**

1. ಕ್ರ.ಸಂ.
2. ಹೆಸರು ಮತ್ತು ತಂದೆಯ
   ಅಥವಾ ಗಂಡನ ಹೆಸರು
3. ಲಿಂಗ ಮತ್ತು ವಯಸ್ಸು
4. ಜಾತಿ ಮತ್ತು ಉಪಜಾತಿ
5. ಅನುಮತಿಸಲಾದ ಗೈರುಹಾಜರಿ ಅವಧಿ. ಯಿಂದ: ಗೆ:
6. ತೆರಳುವ ಸ್ಥಳ
7. ಪ್ರಯಾಣಿಸಬೇಕಾದ ಮಾರ್ಗ:
   ಹೋಗುವಾಗ
   ಹಿಂದಿರುಗುವಾಗ
8. ಯಾವ ವ್ಯವಹಾರದ ಮೇಲೆ
   ಹೋಗುವುದು.
9. ಅನುಮತಿ ನೀಡಿರುವ
   ಪೊಲೀಸ್ ಠಾಣೆಯ ಹೆಸರು ಮತ್ತು
   ನೀಡಿಕೆ ದಿನಾಂಕ
10. ಅನುಮತಿ ನೀಡಲಾದ ವ್ಯಕ್ತಿಯ
    ಎಡಗೈ ಹೆಬ್ಬೆಟ್ಟಿನ ಮುದ್ರೆ.

ಅಪ್ಪಣೆ ಚೀಟಿ ನೀಡುವ ಅಧಿಕಾರಿಯ ಸಹಿ.

| ಸ್ಥಳವನ್ನು ಬಿಡುವ ವೇಳೆ | ಸ್ಥಳವನ್ನು ಸೇರುವ ವೇಳೆ | ಪೊಲೀಸ್ ಠಾಣೆಯಲ್ಲಿ ಹಾಜರಾಗುವುದು | ವೇಳೆ ಮತ್ತು ದಿನಾಂಕ | | |
|---|---|---|---|---|---|
| | | | ಅಲ್ಲಿಂದ ಹೊರಡುವುದು | ನಿವಾಸಕ್ಕೆ ಹಿಂದಿರುಗುವುದು | ಅಪ್ಪಣೆ ಚೀಟಿ ಪಡೆದವನು ಯಾರ ಬಳಿ ಹಾಜರಾಗಿದ್ದಾನೋ ಆ ವ್ಯಕ್ತಿಯ ಸಹಿ |

ಪೊಲೀಸ್ ಠಾಣೆಯ
ಪ್ರಭಾರೀ ಅಧಿಕಾರಿಯ ಷರಾ

**ನಮೂನೆ-ಇ**
**(17ನೇ ನಿಯಮವನ್ನು ನೋಡಿ)**
**ನೋಂದಾಯಿತ ಅಪರಾಧಿಗೆ ನೀಡಲಾಗುವ ಗುರುತಿನ ಪ್ರಮಾಣಪತ್ರ:**
**ನೋಂದಣಿ ಸಂಖ್ಯೆ----------- ಜಾತಿ-----------**

1. ಜಿಲ್ಲೆ
2. ಹೆಸರು ಮತ್ತು ಉಪನಾಮ
3. ತಂದೆಯ / ಗಂಡನ ಹೆಸರು
4. ಮೂಲ ವಾಸಸ್ಥಳ
5. ಎಡಗೈ ಹೆಬ್ಬೆಟ್ಟಿನ ಮುದ್ರೆ ಮತ್ತು
   ವಿವರದ ಗುರುತುಚಿಹ್ನೆ
6. ವಿನಾಯಿತಿ ನೀಡಿದ ದಿನಾಂಕ, ಯಾವುದಾದರೂ ಇದ್ದರೆ,
7. ವಿನಾಯಿತಿ ಯಾವುದಾದರೂ ಇದ್ದರೆ,
   ಅದರ ಸ್ವರೂಪ
8. ಅಂತಿಮ ಬಿಡುಗಡೆಯ ಯಾವುದಾದರೂ ಇದ್ದರೆ, ಆ ದಿನಾಂಕ
   1. ಯಾರೇ ಪೊಲೀಸ್ ಅಧಿಕಾರಿ ಅಥವಾ
      ಮ್ಯಾಜಿಸ್ಟ್ರೇಟನು ಕೇಳಿದಾಗ ಇದನ್ನು ತೋರಿಸಬೇಕು
   2. ಇದನ್ನು ಬಳಸಿಕೊಳ್ಳಲು ಯಾರೇ ಇತರ ವ್ಯಕ್ತಿಗೆ
      ನೀಡಬಾರದು
   3. ನೀಡಿಕೆ ದಿನಾಂಕ

ಪೊಲೀಸ್ ಅಧೀಕ್ಷಕನ ಸಹಿ.

ನಮೂನೆ-ಎಫ್

(18ನೇ ನಿಯಮವನ್ನು ನೋಡಿ)

**ಪೇಟೆಗೆ ಅಥವಾ ಮಾರುಕಟ್ಟೆ ಸ್ಥಳಕ್ಕೆ ಹೋಗಿ ಬರಲು ಖಾಯಂ ಅಪ್ಪಣೆ ಚೀಟಿ**

1. ನೋಂದಣಿ ಸಂಖ್ಯೆ
2. ಹೆಸರು ಮತ್ತು ತಂದೆಯ/ ಗಂಡನ ಹೆಸರು
3. ವಯಸ್ಸು
4. ಜಾತಿ ಮತ್ತು ಉಪ ಜಾತಿ
5. ಹತ್ತಿರದ ಪೇಟೆಯ ಸ್ಥಳ
6. ಹೋಗಲು ಅನುಮತಿಸಲಾದ ದಿನಗಳು ಮತ್ತು ಗಂಟೆಗಳು
7. ಅನುಮತಿಸಲಾದ ಗೈರು ಹಾಜರಿ ಅವಧಿ...........ರಿಂದ.........ವರೆಗೆ
8. ಯಾವ ಪೊಲೀಸ್ ಠಾಣೆಯ ಅಧಿಕಾರ ವ್ಯಾಪ್ತಿಯೊಳಗೆ ವ್ಯಕ್ತಿಯು ವಾಸವಾಗಿರುವನೋ ಆ ಪೊಲೀಸ್ ಠಾಣೆಯ ಹೆಸರು:
9. ನೀಡಿಕೆ ದಿನಾಂಕ

ಪೊಲೀಸ್ ಅಧೀಕ್ಷಕನ ಸಹಿ

**ನಮೂನೆ-ಜಿ**

**(28ನೇ ನಿಯಮ ನೋಡಿ)**

**ವ್ಯವಸ್ಥಾಪನೆಗೊಳಗಾದವನು ಸುಧಾರಕ ವ್ಯವಸ್ಥಾಪನಾ ಕೇಂದ್ರದ ಪರಿಮಿತಿಗಳಿಂದ ಹೊರಗೆ ಹೋಗಲು ಅನುಮತಿಸುವ ಅಪ್ಪಣೆಚೀಟಿ**

1. ಅಪ್ಪಣೆಚೀಟಿ ಮಂಜೂರಾಗಿರುವ ವ್ಯಕ್ತಿಯ ಹೆಸರು

2. ನೋಂದಣಿ ಸಂಖ್ಯೆ:

3. ವ್ಯವಸ್ಥಾಪನಾ ಕೇಂದ್ರ

4. ತಾಲ್ಲೂಕುಗಳು

5. ಯಾವ ಅವಧಿಗಾಗಿ ಅಪ್ಪಣೆಚೀಟಿ ಮಾನ್ಯವಾಗಿದೆ……………ಯಿಂದ:……….ವರೆಗೆ

6. ಅವನು ಹೋಗಲು ಅನುಮತಿಸಲಾದ ವ್ಯವಸ್ಥಾಪನಾ ಕೇಂದ್ರವು ಇರುವ ಸ್ಥಳದ ಹೆಸರು

7. ಅವನು ಯಾರ ಮನೆಗೆ ಹೋಗುವನೋ ಆ ವ್ಯಕ್ತಿಯ ಹೆಸರು

8. ಮಾರ್ಗ ಮಧ್ಯೆ ಅವನು ಹಾಜರಾಗಬೇಕಾದ ಸ್ಥಳಗಳು

9. ಪ್ರಯಾಣದ ಉದ್ದೇಶ

10. ಅವನು ಹಾಜರಿ ಕೂಗಬೇಕಾದ ವೇಳೆ/ ವೇಳೆಗಳು

11. ಅವನು ಯಾರ ಮುಂದೆ ಹಾಜರಿ ಕೂಗಬೇಕಾಗಿದೆಯೋ ಆ ಪ್ರಾಧಿಕಾರ

ದಿನಾಂಕ

ಅಪ್ಪಣೆ ಚೀಟಿ ಮಂಜೂರು ಮಾಡುವ ಅಧಿಕಾರಿಯ ಸಹಿ

**(ಅಪ್ಪಣೆಚೀಟಿ ಹಿಂಭಾಗದಲ್ಲಿ)**

| ಸ್ಥಳ ಅಥವಾ ವ್ಯವಸ್ಥಾಪನಾ ಕೇಂದ್ರ | ಆಗಮನ ಹಾಜರಿಯ ದಿನಾಂಕ ಮತ್ತು ವೇಳೆ | ನಿರ್ಗಮನದ ವರದಿಯ ದಿನಾಂಕ ಮತ್ತು ವೇಳೆ | ಅಪ್ಪಣೆಚೀಟಿ ಹೊಂದಿರುವವರ ಸ್ವತ: ಯಾರ ಮುಂದೆ ಹಾಜರಾಗಿರುವನೋ ಆ ವ್ಯಕ್ತಿಯ ಸಹಿ |
|---|---|---|---|

## ನಮೂನೆ-ಎಚ್

(39ನೇ ನಿಯಮ ನೋಡಿ)

### ವ್ಯವಸ್ಥಾಪನೆಗೊಳಗಾದವನನ್ನು ಷರತ್ತು ಪೂರ್ವಕ ಬಿಡುಗಡೆ ಮಾಡುವ ಬಗ್ಗೆ ಲೈಸೆನ್ಸು

ಹೆಸರು.......... ಜಾತಿ..........

ನೋಂದಣಿ ಸಂಖ್ಯೆ:........

ಕರ್ನಾಟಕ ರೂಢಿಗತ ಅಪರಾಧಿಗಳ ನಿಯಮಗಳು, 1969ರ 39ನೇ ನಿಯಮದ ಉಪಬಂಧದ ಅಡಿಯಲ್ಲಿ ..........ವ್ಯವಸ್ಥಾಪನಾ ಕೇಂದ್ರದಿಂದ ಬಿಡುಗಡೆ ಮಾಡಬಹುದು. ಆದರೆ, ಅವನು,..........ರವರೆಗೆ ಮಾನ್ಯವಾಗಿರತಕ್ಕ ಲೈಸೆನ್ಸ್‌ನ ಅವಧಿಯಲ್ಲಿ ಈ ಮುಂದಿನ ಷರತ್ತುಗಳನ್ನು ಪಾಲಿಸತಕ್ಕದ್ದು.

(ಎ) ಅವನು..........ಗ್ರಾಮ /ತಾಲ್ಲೂಕು /ಜಿಲ್ಲೆಯಲ್ಲಿ ನೆಲೆಸತಕ್ಕದ್ದು.

(ಬಿ) ಅವನು ಯಾವುದೇ ವೃತ್ತಿ ಸಂಘ ಅಥವಾ ರಾಜಕೀಯ ಸಂಸ್ಥೆಗಳಿಗೆ ಸೇರತಕ್ಕದ್ದಲ್ಲ.

(ಸಿ) ಅವನು ಒಳ್ಳೆಯ ನಡತೆಯುಳ್ಳವನಾಗಿರಬೇಕು.

(ಡಿ) ಅವನು ವಾರಕ್ಕೊಮ್ಮೆ ಶುಕ್ರವಾರದಂದು ಗ್ರಾಮದ ಪೊಲೀಸ್ ಪಟೇಲನ ಅಥವಾ ಈ ಉದ್ದೇಶಕ್ಕಾಗಿ ನೇಮಕ ಮಾಡಲಾದ ಇತರ ವ್ಯಕ್ತಿಯ ಮುಂದೆ ಹಾಜರಿ ನೀಡತಕ್ಕದ್ದು.

(ಇ) ಅವನು ರಾತ್ರಿಯಲ್ಲಿ ಅವನ ನಿವಾಸದ ಸ್ಥಳದಿಂದ ಗೈರು ಹಾಜರಾಗಲು ಉದ್ದೇಶಿಸಿದಾಗಲೆಲ್ಲ, ಆ ಪ್ರದೇಶದಲ್ಲಿ ವಾಸಿಸುತ್ತಿರುವ ಇತರ ನಿರ್ಬಂಧಿತ ವ್ಯಕ್ತಿಗಳು ಮಾಡುವಂತಹದೇ ರೀತಿಯಲ್ಲಿ ಅವನ ಗ್ರಾಮದ ಪೊಲೀಸ್ ಪಟೇಲನಿಗೆ ಅಥವಾ ಪೊಲೀಸ್ ಠಾಣೆಯ ಪ್ರಭಾರೀ ಅಧಿಕಾರಿಗೆ ತಿಳಿಸಬೇಕು. ಮೇಲ್ಕಂಡ ಜಿಲ್ಲೆಗಳ ಪರಿಮಿತಿಗಳಾಚೆಗೆ ಪ್ರಯಾಣಿಸಲು ಅನುಮತಿ ನೀಡುವುದಕ್ಕೆ ಸಂಬಂಧಿಸಿದಂತೆ ವ್ಯವಸ್ಥಾಪನಾ ಕೇಂದ್ರದ ಅಧೀಕ್ಷಕನು ಅವನಿಗೆ ಆರು ತಿಂಗಳವರೆಗೆ ಮಾನ್ಯವಾಗಿರುವ ಒಂದು ಅಪ್ಪಣೆ ಚೀಟಿಯನ್ನು ನೀಡಬಹುದು. ವ್ಯವಸ್ಥಾಪನೆಗೊಳಗಾದವನಿಗೆ ಸುಧಾರಣಾಧಿಕಾರಿ ಅಥವಾ ಪೊಲೀಸ್ ಅಧೀಕ್ಷಕನು ಅಂಥ ಅಪ್ಪಣೆಚೀಟಿಯನ್ನು ಯಾವುದೇ ಅವಧಿಯವರೆಗೆ ನೀಡಬಹುದು.

ಮೇಲ್ಕಂಡ ಯಾವುವೇ ಷರತ್ತುಗಳನ್ನು ಉಲ್ಲಂಘಿಸಿದ ಸಂದರ್ಭದಲ್ಲಿ, ಆ ಬಗ್ಗೆ ಸುಧಾರಣಾಧಿಕಾರಿಯೇ ಏಕಮಾತ್ರ ತೀರ್ಪುಗಾರನಾಗಿರತಕ್ಕದ್ದು. ಲೈಸೆನ್ಸು ರದ್ದಾದ ತರುವಾಯ ಸುಧಾರಣಾಧಿಕಾರಿಯು ವ್ಯವಸ್ಥಾಪನಾ ಕೇಂದ್ರದಲ್ಲಿಯೇ ಪುನಃ ಇಟ್ಟುಕೊಳ್ಳತಕ್ಕದ್ದು.

ಲೈಸೆನ್ಸ್‌ನ ಅವಧಿಯು, ವ್ಯವಸ್ಥಾಪನೆಗೊಳಗಾದವನು ಮೇಲ್ಕಂಡ ಷರತ್ತನ್ನು ಪಾಲಿಸಲು ಒಪ್ಪಿಕೊಂಡ ತರುವಾಯ, ಮೇಲ್ಕಂಡ ಗ್ರಾಮದಲ್ಲಿ ವಾಸಿಸುವುದಕ್ಕಾಗಿ ವ್ಯವಸ್ಥಾಪನಾ ಕೇಂದ್ರದ ಪರಿಮಿತಿಯಿಂದ ಸಾಗುವ ವೇಳೆಯಿಂದ ಆರಂಭವಾಗುತ್ತದೆ.

ದಿನಾಂಕ:.......... ಸುಧಾರಣಾಧಿಕಾರಿಯ ಸಹಿ

ಮೇಲ್ಕಂಡ ಷರತ್ತುಗಳನ್ನು ನನಗೆ ಓದಿ ಹೇಳಲಾಗಿದೆ ಮತ್ತು ನಾನು ಅವುಗಳನ್ನು ಒಪ್ಪಿಕೊಂಡಿದ್ದೇನೆ. ವ್ಯವಸ್ಥಾಪನೆಗೊಳಗಾದವನ ಸಹಿ ಅಥವಾ ಹೆಬ್ಬೆಟ್ಟಿನ ಮುದ್ರೆ ನಾನು ವಿವರಿಸಿದ್ದೇನೆ ಮತ್ತು ಅವುಗಳನ್ನು ಒಪ್ಪಿಕೊಂಡಿರುತ್ತಾನೆ.

ಸಂಸ್ಥೆಯ ಅಧೀಕ್ಷಕ.

ಅವನು ಮೇಲ್ಕಂಡ ಸ್ಥಳದಲ್ಲಿ ವಾಸಿಸಲು.............ರಂದು ವ್ಯವಸ್ಥಾಪನಾ ಕೇಂದ್ರದ ಪರಿಮಿತಿಯನ್ನು ಬಿಟ್ಟಿರುತ್ತಾನೆ.

ಅಧೀಕ್ಷಕ,
ವ್ಯವಸ್ಥಾಪನಾ ಕೇಂದ್ರ,
(ಕ್ರ.ಸಂ. ಎಚ್‌ಡಿ 5 ಪಿಆರ್‌ಎಚ್ 62)

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
ಎನ್.ಕೆ. ಶ್ರೀನಿವಾಸಮೂರ್ತಿ,
ಅಧೀನ ಕಾರ್ಯದರ್ಶಿ.

The above translation of the Karnataka Habitual Offenders Act, 1961 (Karnataka Act 24 of 1961) and the Karnataka Habitual Offenders Rules, 1969 shall be authoritative text in Kannada Language under section 5A of the Karnataka Official Language Act, 1963 (Karnataka Act 26 of 1963).

GOVERNOR OF KARNATAKA
ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
ಜಿ.ಕೆ. ಬೋರೇಗೌಡ
ಸರ್ಕಾರದ ಕಾರ್ಯದರ್ಶಿ,
ಸಂಸದೀಯ ವ್ಯವಹಾರಗಳು ಮತ್ತು ಶಾಸನ ರಚನೆ ಇಲಾಖೆ

ಪಿ.ಆರ್. 1288

## ಅಧಿಸೂಚನೆ

**ಸಂಖ್ಯೆ: ಸಂವ್ಯಶಾಇ 61 ರಾಶಾಪು 2006, ಬೆಂಗಳೂರು, ದಿನಾಂಕ: 29ನೇ ಜುಲೈ 2006**

ಕರ್ನಾಟಕ ರಾಜ್ಯ ಸಿವಿಲ್ ಸೇವಾ (ಬಡ್ತಿ ವೇತನ ಮತ್ತು ನಿವೃತ್ತಿ ವೇತನದ ವಿನಿಯಮನ) ಅಧಿನಿಯಮ, 1973 (1974ರ 11) ಮತ್ತು ಕರ್ನಾಟಕ ರಾಜ್ಯ ಸಿವಿಲ್ ಸೇವಾ (ಬಡ್ತಿ ವೇತನ ಮತ್ತು ನಿವೃತ್ತಿ ವೇತನದ ವಿನಿಯಮನ) ನಿಯಮಗಳು, 1978ರ ಅಧಿಕೃತ ಕನ್ನಡ ಭಾಷಾಂತರವನ್ನು ಕರ್ನಾಟಕ ಅಫಿಷಿಯಲ್ ಲಾಂಗ್ವಾಜ್ ಆಕ್ಟ್, 1963ರ ಪ್ರಕರಣ 5A ಅಡಿಯಲ್ಲಿ ರಾಜ್ಯಪಾಲರ ಅಧಿಕಾರದ ಮೇರೆಗೆ ಸಾರ್ವಜನಿಕರ ಮಾಹಿತಿಗಾಗಿ ರಾಜ್ಯ ಪತ್ರದಲ್ಲಿ ಮರು ಪ್ರಕಟಿಸಲು ಆದೇಶಿಸಲಾಗಿದೆ.

# ಕರ್ನಾಟಕ ರಾಜ್ಯ ಸಿವಿಲ್ ಸೇವಾ (ಬಡ್ತಿ, ವೇತನ ಮತ್ತು ನಿವೃತ್ತಿ ವೇತನದ ವಿನಿಯಮನ) ಅಧಿನಿಯಮ, 1973

## ಪ್ರಕರಣಗಳ ಅನುಕ್ರಮಣಿಕೆ

ಪ್ರಕರಣಗಳು



## ಉದ್ದೇಶಗಳು ಮತ್ತು ಕಾರಣಗಳ ಹೇಳಿಕೆ

**1974ರ ಅಧಿನಿಯಮ 11:–** ನಿಯಂತ್ರಣಕ್ಕೆ ಮೀರಿದ ಕಾರಣಗಳಿಂದಾಗಿ ಅಂತರ ರಾಜ್ಯ ಜೇಷ್ಠತಾ ಪಟ್ಟಿಗಳನ್ನು ಅಂತಿಮವಾಗಿ ಸಿದ್ಧಪಡಿಸುವ ಕಾರ್ಯದಲ್ಲಿ ಅನಿವಾರ್ಯವಾಗಿ ವಿಳಂಬವಾಯಿತು. ಹಲವಾರು ಕಚೇರಿಗಳಿಂದ ಮತ್ತು ಮಾತ್ರ ರಾಜ್ಯಗಳಿಂದ ಮಾಹಿತಿಯನ್ನು ಸಂಗ್ರಹಿಸಬೇಕಾಗಿತ್ತು, ಸ್ಪಷ್ಟೀಕರಣ ಪಡೆಯಬೇಕಾಗಿತ್ತು, ದಸ್ತಾವೇಜು ಮತ್ತು ದಾಖಲೆಗಳನ್ನು ಪಡೆಯುವುದು, ಮುಂತಾದವುಗಳನ್ನು ಮಾಡಬೇಕಾಗಿತ್ತು. ಇದಲ್ಲದೆ, ನ್ಯಾಯಾಲಯದ ಮುಂದೆ ವ್ಯವಹರಣೆಗಳಿದ್ದು ಅವುಗಳ ಅಂತಿಮ ಫಲಿತಾಂಶಗಳಿಗಾಗಿ ಕಾಯಬೇಕಾಗಿತ್ತು. ಈ ಮಧ್ಯೆ, ಸರ್ಕಾರಿ ಸೇವೆಯ ಅವಶ್ಯಕತೆಯಿಂದಾಗಿ ತಾತ್ಕಾಲಿಕ ಅಂತರ ರಾಜ್ಯ ಜ್ಯೇಷ್ಠತಾ ಪಟ್ಟಿಗಳ ಆಧಾರದ ಮೇಲೆ ಬಡ್ತಿಗಳನ್ನು ನೀಡಲಾಗುತ್ತಿತ್ತು. ಈಗ ಹೆಚ್ಚು ಕಡಿಮೆ ಎಲ್ಲ ಇಲಾಖೆಗಳಲ್ಲಿ ಪ್ರಕಟವಾದ ಅಂತಿಮ ಅಂತರ ರಾಜ್ಯ ಜ್ಯೇಷ್ಠತಾ ಪಟ್ಟಿಗಳಲ್ಲಿ ಮಾಡಲಾದ ಬದಲಾವಣೆಗಳ ಹಿನ್ನೆಲೆಯಲ್ಲಿ ಈ ಬಡ್ತಿಗಳನ್ನು ಪರಿಷ್ಕರಿಸಬೇಕಾಗಿದೆ. ಇದಕ್ಕಾಗಿ ಬೇಡಿಕೆಗಳು ಬಂದಿದ್ದು, ಬಹಳಷ್ಟು ಸಂಖ್ಯೆಯ ಬೇಡಿಕೆಗಳು ನ್ಯಾಯಾಲಯಗಳ ಮುಂದಿವೆ. ನ್ಯಾಯಾಲಯಗಳು, ಪೂರ್ವಾನ್ವಯವಾಗಿ ಬಡ್ತಿ ನೀಡುವ ಮತ್ತು ತತ್ಪರಿಣಾಮವಾದ ಆರ್ಥಿಕ ಪ್ರಯೋಜನಗಳನ್ನು ಸಹ ನೀಡುವ ನಿಟ್ಟಿನಲ್ಲಿ ವಿಷಯವನ್ನು ಪರಿಗಣಿಸಬೇಕೆಂದು ನಿರ್ದೇಶನಗಳನ್ನು ನೀಡಿವೆ. ಒಂದಕ್ಕಿಂತ ಹೆಚ್ಚು ಬಡ್ತಿ ನೀಡಿದ ಕೆಲವು ಪ್ರಕರಣಗಳಲ್ಲಿ ಅದೇ ರೀತಿಯ ಪರಿಹಾರವನ್ನು ಸಹ ನೀಡಲಾಗಿದೆ. ಈ ಎಲ್ಲ ಪ್ರಕರಣಗಳಲ್ಲಿ, ತಾತ್ಕಾಲಿಕ ಪಟ್ಟಿಗಳ ಆಧಾರದ ಮೇಲೆ ಬಡ್ತಿ ಪಡೆದ ಕೆಲವರು ಬಡ್ತಿ ಹುದ್ದೆಗಳ ಕರ್ತವ್ಯಗಳನ್ನು ನಿರ್ವಹಿಸಿದ್ದಿರಬಹುದು ಮತ್ತು ಸದರಿ ಹುದ್ದೆಗಳಿಗೆ ಸಂಬಂಧಪಟ್ಟ ವೇತನ ಮತ್ತು ಭತ್ಯಗಳನ್ನು ಅವರಿಗೆ ಸಂದಾಯ ಮಾಡಿದ್ದಿರಬಹುದು. ನ್ಯಾಯಾಲಯದ ನಿರ್ದೇಶನಗಳ ಪ್ರಕಾರ ಪೂರ್ವಾನ್ವಯವಾಗಿ ನೀಡಿದ ಪರಿಣಾಮವಾಗಿ ಎರಡು ಸಲ ಸಂದಾಯ ಮಾಡಿದಂತಾಗುತ್ತದೆ . ಒಂದು ಈಗಾಗಲೇ ಸಂದಾಯ ಮಾಡಿದ್ದು ಮತ್ತು ಇನ್ನೊಂದು ಈಗ ಬಡ್ತಿ ಪಡೆದ ವ್ಯಕ್ತಿಗೆ ಸಂದಾಯ ಮಾಡಬೇಕಾದದ್ದು. ಅಂದರೆ ಒಂದೇ ಹುದ್ದೆಯ ಕರ್ತವ್ಯಗಳನ್ನು ನಿರ್ವಹಿಸಿದ್ದಕ್ಕಾಗಿ ಇಬ್ಬರು ವ್ಯಕ್ತಿಗಳಿಗೆ ಸಂದಾಯ ಮಾಡಿದಂತಾಯಿತು. ಇವೆಲ್ಲದರಿಂದ ರಾಜ್ಯದ ಬೊಕ್ಕಸದ ಮೇಲೆ ಭಾರೀ ಆರ್ಥಿಕ ಹೊರೆ ಬಿದ್ದಂತಾಗಿದೆ.

ಇದಲ್ಲದೆ, ಹಲವಾರು ತೀರ್ಮಾನಗಳಲ್ಲಿ ಶಾಸನ ಬದ್ಧ ಹುದ್ದೆಗಳಿಗೆ ವ್ಯಕ್ತಿಗಳನ್ನು ಪೂರ್ವಾನ್ವಯವಾಗಿ ನೇಮಕ ಮಾಡುವುದು ಕಾನೂನಿನ ದೃಷ್ಟಿಯಲ್ಲಿ ಅಂಗೀಕಾರಾರ್ಹವಲ್ಲವೆಂಬ ಅಂಶವು ಸ್ಥಾಪಿತವಾಗಿದೆ. ಪೂರ್ವಾನ್ವಯ ಬಡ್ತಿ ನೀಡಿದ ಪ್ರಸಂಗಗಳಲ್ಲಿ ಹಿಂದೆ ಇದ್ದ ಹುದ್ದೆಗೆ ಪೂರ್ವಾನ್ವಯವಾಗಿ ಹಿಂಬಡ್ತಿ ನೀಡುವುದು ಅನಿವಾರ್ಯವಾಗುತ್ತದೆ ಮತ್ತು ಇದರಿಂದಾಗಿ ಹಿಂದೆ ಇದ್ದ ಹುದ್ದೆಗೆ ಹಿಂಬಡ್ತಿ ಪಡೆದ ವ್ಯಕ್ತಿಗಳು ನಿರ್ವಹಿಸಿದ ಪರಿಣಾಮಕಾರಿಯಲ್ಲದ ಶಾಸನ ಬದ್ಧ ಪ್ರಕಾರ್ಯಗಳು ಜಟಿಲತೆಗೆ ಎಡೆ ಮಾಡಿಕೊಡುತ್ತವೆ. ಈ ಎಲ್ಲ ವಿಷಯಗಳನ್ನು ನಿಯಂತ್ರಿಸುವುದು ಅಗತ್ಯವಾಗಿದೆ. ಆದ್ದರಿಂದ ಸರ್ಕಾರವು ಪರಿಶೀಲನೆಗೆ ಮತ್ತು ಉತ್ತರಾನ್ವಯ ಬಡ್ತಿಗೆ ಸಂಬಂಧಿಸಿದಂತೆ ಉಪಬಂಧ ಕಲ್ಪಿಸುವ ಕರ್ನಾಟಕ ರಾಜ್ಯ ಸರ್ಕಾರಿ ಸೇವಾ (ಹಂಚಿಕೆ ಪಡೆದವರು) (ವಿಶೇಷ) ನಿಯಮಗಳು, 1971ನ್ನು ಜಾರಿಗೊಳಿಸಿತು. ಸದರಿ ನಿಯಮಗಳು, ಮೇಲೆ ಗುರುತಿಸಲಾದ ತೊಂದರೆಗಳನ್ನು ನಿವಾರಿಸುವುವೆಂದು ನಿರೀಕ್ಷಿಸಲಾಗಿತ್ತು. ಆದರೆ ಸದರಿ ನಿಯಮಗಳಿಗೆ ಸಂಬಂಧಿಸಿದಂತೆ ನ್ಯಾಯಾಲಯದ ಮೊರೆ ಹೋದಾಗ ಉಚ್ಚ ನ್ಯಾಯಾಲಯವು ಕೆಲವೊಂದು ಪ್ರಕರಣಗಳಲ್ಲಿ ಪೂರ್ವಾನ್ವಯ ಬಡ್ತಿಗಳನ್ನು ಮತ್ತು ತತ್ಪರಿಣಾಮವಾದ ಆರ್ಥಿಕ ಸೌಲಭ್ಯಗಳನ್ನು ನೀಡಬೇಕೆಂದು ನಿರ್ದೇಶನ ನೀಡಿತು. ಅಂದರೆ, ಸದರಿ ನಿಯಮಗಳು ಪೂರ್ವಾನ್ವಯ ಬಡ್ತಿ ಗಳನ್ನು ಮಾಡಲು ಮತ್ತು ತತ್ಪರಿಣಾಮದ ಆರ್ಥಿಕ ಸೌಲಭ್ಯವನ್ನು ನೀಡುವುದಕ್ಕೆ ಅಡ್ಡಿಯಾಗುವುದಿಲ್ಲ ಎಂದು ಹೇಳಿದಂತಾಯಿತು. ರಾಜ್ಯ ಸರ್ಕಾರವು ಈ ಕೆಲವು ತೀರ್ಮಾನಗಳ ವಿರುದ್ಧ ಸರ್ವೋಚ್ಚ ನ್ಯಾಯಾಲಯಕ್ಕೆ ಅಪೀಲನ್ನು ಸಲ್ಲಿಸಿತು. ಆದರೆ ನಿರ್ದೇಶನಗಳನ್ನು ನಿರ್ದಿಷ್ಟ ದಿನಾಂಕಗಳಂದು ಜಾರಿಗೊಳಿಸುವಂತೆ ನ್ಯಾಯಾಲಯವು ನಿಗದಿಪಡಿಸಿದ ಪ್ರಕರಣಗಳಲ್ಲಿ ರಾಜ್ಯದ ವಿರುದ್ಧ ನಿಂದನಾ ಅರ್ಜಿಗಳನ್ನು ಸಲ್ಲಿಸಲಾಯಿತು. ಸೂಕ್ತ ಕಾನೂನು ರಚಿಸಿ ಸದರಿ ತೀರ್ಮಾನಗಳ ಪರಿಣಾಮವನ್ನು ನಿವಾರಿಸದ ಹೊರತು, ಸರ್ಕಾರವು, ಮಾಡದೇ ಇರುವ ಕೆಲಸಕ್ಕೆ ಪೂರ್ವಾನ್ವಯ ಬಡ್ತಿಗಳ ಆಧಾರದ ಮೇಲೆ ದೊಡ್ಡ ಪ್ರಮಾಣದಲ್ಲಿ ಹಣ ಸಂದಾಯ ಮಾಡಬೇಕಾಗುತ್ತದೆ. ಸಂವಿಧಾನದ 309ನೇ ಅನುಚ್ಛೇದದ ಪರಂತುಕದ ಅಡಿಯಲ್ಲಿ ನಿಯಮಗಳನ್ನು ರಚಿಸುವ ಮೂಲಕ ಕಾನೂನುಬದ್ಧವಾಗಿ ನ್ಯಾಯಾಲಯದ ತೀರ್ಮಾನವನ್ನು ಅತಿಕ್ರಮಿಸಲು ಸಾಧ್ಯವಿಲ್ಲವೆಂದು ಭಾವಿಸಲಾಗಿದೆ.

ತಾರತಮ್ಯವನ್ನು ನಿವಾರಿಸುವ ಸಲುವಾಗಿ ಹಂಚಿಕೆದಾರರಲ್ಲದ ಇತರ ಸರ್ಕಾರಿ ನೌಕರರ ಸಂಬಂಧದಲ್ಲಿ ಏಕರೂಪದ ಉಪಬಂಧಗಳ ಅಗತ್ಯವಿದೆ.

ಆದ್ದರಿಂದ ಈ ವಿಧೇಯಕ.

ರಾಜ್ಯಗಳ ಪುನಾರಚನೆ ಅಧಿನಿಯಮ, 1956ರ 115ನೇ ಪ್ರಕರಣದ (7)ನೇ ಉಪ ಪ್ರಕರಣದ ಉಪಬಂಧದ ಪರಂತುಕದ ಸಂಬಂಧದಲ್ಲಿ ಕೇಂದ್ರ ಸರ್ಕಾರದ ಅಗತ್ಯ ಅನುಮತಿಯನ್ನು ಪಡೆಯಲಾಗಿದೆ.

(ಕರ್ನಾಟಕ ರಾಜ್ಯ ಪತ್ರ ಭಾಗ IV- 2ಎ (ವಿಶೇಷಸಂಚಿಕೆ) ಸಂಖ್ಯೆ 263, ದಿನಾಂಕ 15.3.1973, ಪುಟ 1213 ರಲ್ಲಿ ಪ್ರಕಟಿಸಲಾಗಿದೆ).

## II

**1976ರ ತಿದ್ದುಪಡಿ ಮಾಡುವ ಅಧಿನಿಯಮ 40:–** ಈ ಅಧಿನಿಯಮದ ಮೂಲಕ ಕರ್ನಾಟಕ ಸೇವಾ ಪರೀಕ್ಷೆಗಳು ಅಧಿನಿಯಮ, 1976ನ್ನು ಅಧಿನಿಯಮಿತಿಗೊಳಿಸಲಾಯಿತು ಮತ್ತು ಅದರಲ್ಲಿ ಈ ಅಧಿನಿಯಮಕ್ಕೆ ಕೆಲವೊಂದು ಮಹತ್ವದ ತಿದ್ದುಪಡಿಗಳನ್ನು ತರಲಾಯಿತು ಮತ್ತು ಹೊಸ 9ಎ ಪ್ರಕರಣವನ್ನು ಸೇರಿಸಲಾಯಿತು.

## III

**1982ರ ತಿದ್ದುಪಡಿ ಮಾಡುವ ಅಧಿನಿಯಮ 25:–** ರಾಜ್ಯಗಳ ಪುನಾರಚನೆ ಅಧಿನಿಯಮ, 1956ರ 105ನೇ ಪ್ರಕರಣದ ಅಡಿಯಲ್ಲಿ ಹೊಸ ರಾಜ್ಯದ ವ್ಯವಹಾರಗಳ ಸಂಬಂಧದಲ್ಲಿ ಸೇವೆ ಸಲ್ಲಿಸಲು ಹಂಚಿಕೆ ಮಾಡಿದ ಅಥವಾ ಹಂಚಿಕೆ ಮಾಡಲಾದವರೆಂದು ಭಾವಿಸಲಾದವರನ್ನು ಒಳಗೊಂಡಂತೆ ಸಿವಿಲ್ ನೌಕರರ ಬಡ್ತಿ, ವೇತನ ಮತ್ತು ನಿವೃತ್ತಿ ವೇತನ ಹಾಗೂ ಇತರ ಸೇವಾ ಷರತ್ತುಗಳ ವಿನಿಯಮನಕ್ಕಾಗಿ ಉಪಬಂಧ ಕಲ್ಪಿಸಿ ಕರ್ನಾಟಕ ರಾಜ್ಯ ಸಿವಿಲ್ ಸೇವೆಗಳು (ಬಡ್ತಿ, ವೇತನ ಮತ್ತು ನಿವೃತ್ತಿ ವೇತನ ವಿನಿಯಮನ) ಅಧಿನಿಯಮ, 1973ನ್ನು (1973ರ ಅಧಿನಿಯಮ 11) 1974ನೇ ಇಸವಿಯಲ್ಲಿ ಜಾರಿಗೊಳಿಸಲಾಯಿತು.

2. ದಿನಾಂಕ 1.11.1956ರಂದು ಮಾಡಲಾದ ಬಡ್ತಿಗಳನ್ನು ಭಾರತ ಸರ್ಕಾರದ ತೀರ್ಮಾನಗಳಿಗನುಸಾರವಾಗಿ ಪ್ರಕಟವಾದ ಅಂತಿಮ ಐ.ಎಸ್‌ಎಸ್. ಪಟ್ಟಿಗಳ ಆಧಾರದ ಮೇಲೆ ಅಧಿನಿಯಮದ 4 (1)ನೇ ಪ್ರಕರಣದ ಅಡಿಯಲ್ಲಿ ಪರಿಷ್ಕರಿಸಬೇಕಾಗಿತ್ತು. ಹಾಗೆ ಬಡ್ತಿಗಳನ್ನು ಪರಿಷ್ಕರಿಸುತ್ತಿರುವಾಗ ತಾತ್ಕಾಲಿಕ ಐ.ಎಸ್.ಎಸ್. ಪಟ್ಟಿಗಳಲ್ಲಿನ ತಮ್ಮ ಸ್ಥಾನಗಳ ಆಧಾರದ ಮೇಲೆ ಈ ಮೊದಲು ಬಡ್ತಿ ಪಡೆದ ಕೆಲವು ಅಧಿಕಾರಿಗಳು ತಮ್ಮ ವಾಸ್ತವಿಕ ಬಡ್ತಿಯ ದಿನಾಂಕಗಳಿಗಿಂತ ತರುವಾಯದ ದಿನಾಂಕಗಳಂದು ಬಡ್ತಿಗೆ ಅರ್ಹರಾಗಿದ್ದುದನ್ನು ಗಮನಿಸಲಾಯಿತು. ಅಂದರೆ ಅವರ ಮೊದಲಿನ ಬಡ್ತಿಯು ಆಕಸ್ಮಿಕವಾಗಿತ್ತೆಂದು ಮತ್ತು ಆ ಕಾರಣಕ್ಕಾಗಿ ವೇತನವನ್ನು ಪರಿಷ್ಕರಿಸಬೇಕಾಗಿತ್ತೆಂದು ಅರ್ಥ. ಅಂಥ ಪ್ರಕರಣಗಳಲ್ಲಿ ವೇತನ ವಿನಿಯಮನಕ್ಕಾಗಿ ಅಧಿನಿಯಮದಲ್ಲಿ ಯಾವುದೇ ಉಪಬಂಧವಿರಲಿಲ್ಲ. ಅಂಥ ಅಧಿಕಾರಿಗಳಿಗೆ ಸಂಬಂಧಿಸಿದಂತೆ, ಅವರ ಅರ್ಹತೆಯ ದಿನಾಂಕದಿಂದ ವೇತನದ ಮರುನಿಗದಿಗೆ ಅವಕಾಶ ಮಾಡುವ ಸಲುವಾಗಿ ಅಧಿನಿಯಮದಲ್ಲಿ ಒಂದು ಉಪಬಂಧವನ್ನು ಕಲ್ಪಿಸುವುದು ಅಗತ್ಯವೆಂದು ಪರಿಗಣಿಸಲಾಯಿತು.

3. ಅಲ್ಲದೆ, ಕರ್ನಾಟಕ ಸೇವಾ ಪರೀಕ್ಷೆಗಳ ಅಧಿನಿಯಮ, 1976ರಲ್ಲಿ ಒಂದು ಅಸಂಗತತೆಯಿದೆ. ಸದರಿ ಅಧಿನಿಯಮದ 8 (2)ನೇ ಪ್ರಕರಣವು, ಕರ್ನಾಟಕ ರಾಜ್ಯ ಸರ್ಕಾರಿ ಸೇವೆಗಳ (ಬಡ್ತಿ, ವೇತನ ಮತ್ತು ನಿವೃತ್ತಿ ವೇತನ ವಿನಿಯಮನ) ಅಧಿನಿಯಮ, 1973ರ ಪ್ರಕರಣ 3 ನ್ನು ತಿದ್ದುಪಡಿ ಮಾಡಿದೆ. 1976ರ ಅಧಿನಿಯಮವು ದಿನಾಂಕ 1.11.1956ರಿಂದ ಪರಿಣಾಮಕಾರಿಯಾಗುವಂತೆ ಜಾರಿಗೆ ಬಂದಿದ್ದರೆ, 1973ರ ಅಧಿನಿಯಮದ 3ನೇ ಪ್ರಕರಣವು ದಿನಾಂಕ 11.4.1974ರಿಂದ ಪರಿಣಾಮಕಾರಿಯಾಗುವಂತೆ ಜಾರಿಗೆ ಬಂದಿದೆ. ತಿದ್ದುಪಡಿ ಉಪಬಂಧವು ಮೂಲ ಉಪಬಂಧವು ಜಾರಿಗೆ ಬಂದ ದಿನಾಂಕಕ್ಕಿಂತ ಹಿಂದಿನ ಒಂದು ದಿನಾಂಕದಿಂದ ಜಾರಿಗೆ ಬರಲು ಸಾಧ್ಯವಿಲ್ಲ. ಈ ಅಸಂಗತತೆಯನ್ನು ನಿವಾರಿಸುವ ಸಲುವಾಗಿ ಕರ್ನಾಟಕ ಸೇವಾ ಪರೀಕ್ಷೆಗಳ ಅಧಿನಿಯಮ, 1976ರ 8ನೇ ಪ್ರಕರಣವನ್ನು ಸೂಕ್ತವಾಗಿ ತಿದ್ದುಪಡಿ ಮಾಡಬೇಕಾಗಿದೆ.

4. ಆದ್ದರಿಂದ ಈ ವಿಧೇಯಕ.

(ಕರ್ನಾಟಕ ರಾಜ್ಯ ಪತ್ರ ಭಾಗ IV-2 ಎ (ವಿಶೇಷ ಸಂಚಿಕೆ) ಸಂಖ್ಯೆ 223, ದಿನಾಂಕ 31.3.1981 ಪುಟ 4 ರಲ್ಲಿ ಪ್ರಕಟವಾಗಿದೆ).

## 1974ರ [1][ಕರ್ನಾಟಕ][1] ಅಧಿನಿಯಮ ಸಂಖ್ಯೆ 11

*(1974ರ ಏಪ್ರಿಲ್ ಹನ್ನೊಂದನೇ ದಿನಾಂಕದ ಕರ್ನಾಟಕ ರಾಜ್ಯ ಪತ್ರದ ವಿಶೇಷ ಸಂಚಿಕೆಯಲ್ಲಿ ಮೊದಲು ಪ್ರಕಟವಾಗಿದೆ)*

# [1][ಕರ್ನಾಟಕ][1] ರಾಜ್ಯ ಸಿವಿಲ್ ಸೇವಾ (ಬಡ್ತಿ, ವೇತನ ಮತ್ತು ನಿವೃತ್ತಿ ವೇತನದ ವಿನಿಯಮನ) ಅಧಿನಿಯಮ, 1973

(1974ರ ಏಪ್ರಿಲ್ ಹನ್ನೊಂದನೇ ದಿನದಂದು ರಾಜ್ಯಪಾಲರಿಂದ ಅನುಮೋದನೆಯನ್ನು ಪಡೆಯಲಾಗಿದೆ)

(1976ರ 40 ಮತ್ತು 1982ರ 25ನೇ ಕರ್ನಾಟಕ ಅಧಿನಿಯಮಗಳಿಂದ ತಿದ್ದುಪಡಿಯಾದಂತೆ)

ರಾಜ್ಯಗಳ ಪುನಾರಚನಾ ಅಧಿನಿಯಮ, 1956ರ ಅಡಿಯಲ್ಲಿ ಅಥವಾ ಅದರ 115ನೇ ಪ್ರಕರಣದ ಅನುಸರಣೆಯಲ್ಲಿ [1][ಕರ್ನಾಟಕ][1] ರಾಜ್ಯದ ವ್ಯವಹಾರಗಳಿಗೆ ಸಂಬಂಧಿಸಿದಂತೆ ಸೇವೆ ಸಲ್ಲಿಸಲು ಹಂಚಿಕೆ ಮಾಡಿದ ಅಥವಾ ಹಂಚಿಕೆ ಮಾಡಲಾಗಿದೆಯೆಂದು ಭಾವಿಸಲಾದ ಸಿವಿಲ್ ನೌಕರರನ್ನೂ ಒಳಗೊಂಡಂತೆ [1][ಕರ್ನಾಟಕ][1] ರಾಜ್ಯದಲ್ಲಿನ ಸಿವಿಲ್ ನೌಕರರಿಗೆ ಉತ್ತರಾನ್ವಯ ಬಡ್ತಿಗಳಿಗೆ ಉಪಬಂಧ ಕಲ್ಪಿಸುವ ಮತ್ತು ಅವರ ವೇತನ, ಜ್ಯೇಷ್ಠತೆ, ನಿವೃತ್ತಿ ವೇತನ ಮತ್ತು ಇತರ ಸೇವಾ ಷರತ್ತುಗಳನ್ನು ವಿನಿಯಮಿಸುವ ಒಂದು ಅಧಿನಿಯಮ.

1. 1976ರ ಅಧಿನಿಯಮ 40 ಮತ್ತು 1982ರ ಅಧಿನಿಯಮ 25 ರ ಮೂಲಕ 11.04.1974 ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.

ರಾಜ್ಯಗಳ ಪುನಾರಚನಾ ಅಧಿನಿಯಮ, 1956ರ (1956ರ ಕೇಂದ್ರಾಧಿನಿಯಮ 37) 115ನೇ ಪ್ರಕರಣದ (5)ನೇ ಉಪ ಪ್ರಕರಣದ ಅನುಸರಣೆಯಲ್ಲಿ ಸಿದ್ಧಪಡಿಸಲಾದ ಹಲವಾರು ಅಂತರ ರಾಜ್ಯ ಜೇಷ್ಠತಾ ಪಟ್ಟಿಗಳಲ್ಲಿರುವ ಸರ್ಕಾರಿ ನೌಕರರ ಶ್ರೇಣಿ ನಿರ್ಣಯವನ್ನು ಆಧರಿಸಿ, ಶಾಸನ ಬದ್ಧ ಮತ್ತು ಇತರ ಪದಗಳಿಗೆ ಪೂರ್ವಾನ್ವಯ ಬಡ್ತಿಗಳನ್ನು ಮಾಡಲು ನ್ಯಾಯಾಲಯಗಳು ನಿರ್ದೇಶನವನ್ನು ನೀಡಿರುವುದರಿಂದ;

ಮತ್ತು 1967ರ ಆಲ್ ಇಂಡಿಯಾ ರಿಪೋರ್ಟರ್‌ನ ಸರ್ವೋಚ್ಚ ನ್ಯಾಯಾಲಯ 856ರಲ್ಲಿ ಅಜಿತ್ ಸಿಂಗ್ ವಿರುದ್ಧ ಪಂಜಾಬ್ ರಾಜ್ಯ ಪ್ರಕರಣದಲ್ಲಿ ವರದಿಯಾದಂತೆ ಮತ್ತು 1970ರ ಆಲ್ ಇಂಡಿಯಾ ರಿಪೋರ್ಟರ್‌ನ ಸರ್ವೋಚ್ಚ ನ್ಯಾಯಾಲಯ 385ರಲ್ಲಿ ಅಲೆಪ್ಪಿ ಆದಾಯ ತೆರಿಗೆ ಅಧಿಕಾರಿ ವಿರುದ್ಧ ಎನ್.ಸಿ. ಪೊನ್ನೂಸೆ ಪ್ರಕರಣದಲ್ಲಿ ವರದಿಯಾದಂತೆ ಸರ್ವೋಚ್ಚ ನ್ಯಾಯಾಲಯವು, ಶಾಸನ ಬದ್ಧ ಪ್ರಕಾರ್ಯಗಳನ್ನು ಚಲಾಯಿಸಬಹುದಾದ ಪದಗಳಿಗೆ ಸಿವಿಲ್ ನೌಕರರ ನೇಮಕಾತಿಗಳನ್ನು ಪೂರ್ವಾನ್ವಯ ಪರಿಣಾಮ ನೀಡಿ ಮಾಡಲು ಸಾಧ್ಯವಿಲ್ಲವೆಂದು ತೀರ್ಮಾನಿಸಿರುವುದರಿಂದ;

ಮತ್ತು ಪೂರ್ವಾನ್ವಯ ಬಡ್ತಿಗಳ ಸಂದರ್ಭದಲ್ಲಿ, ಸಂಬಂಧಪಟ್ಟ ಬಡ್ತಿ ಹುದ್ದೆ ಅಥವಾ ಪದಗಳಲ್ಲಿ ಕೆಲಸ ಮಾಡಿಲ್ಲದಿರುವ ವ್ಯಕ್ತಿಗಳಿಗೆ ದೊಡ್ಡ ಪ್ರಮಾಣದಲ್ಲಿ ಹಣ ಸಂದಾಯ ಮಾಡಬೇಕಾಗಿರುವ ಕಾರಣದಿಂದಾಗಿ ರಾಜ್ಯದ ಆರ್ಥಿಕ ಸ್ಥಿತಿಗೆ ಹಾನಿಯಾಗುವುದಲ್ಲದೆ, ಪೂರ್ವಾನ್ವಯವಾಗಿ ಹಿಂದೆ ಇದ್ದ ಹುದ್ದೆಗೆ ಕಳುಹಿಸುವುದರಿಂದಾಗಿ ಮತ್ತು ಹಿಂದೆ ಇದ್ದ ಹುದ್ದೆಗೆ ವ್ಯಕ್ತಿಗಳು ನಿರ್ವಹಿಸಿದ ಶಾಸನ ಬದ್ಧ ಪ್ರಕಾರ್ಯಗಳು ಅಮಾನ್ಯವಾಗುತ್ತವೆಯಾದ್ದರಿಂದ;

ಮತ್ತು ಪೂರ್ವಾನ್ವಯ ಬಡ್ತಿಗಳು, ಬಡ್ತಿ ಹುದ್ದೆಗಳನ್ನು ಅಥವಾ ಪದಗಳನ್ನು ಹೊಂದುವ ಸಂಬಂಧದಲ್ಲಿ, ಸರ್ಕಾರಿ ನೌಕರರಿಗೆ ಇರಬೇಕಾದ ಅರ್ಹತೆಯ ನಿರ್ಧರಣೆಯನ್ನು ಒಳಗೊಳ್ಳುವುದಿಲ್ಲ ಮತ್ತು ಬಡ್ತಿಗಳಿಗೆ ಇರುವ ಅವರ ಅರ್ಹತೆಯ ಆಧಾರದ ಮೇಲೆ ಮಾತ್ರ ಅಂಥ ಹುದ್ದೆಗಳಲ್ಲಿ ಅಥವಾ ಪದಗಳಲ್ಲಿ ಮುಂದುವರಿಯಲು ಸಾಧ್ಯವಾಗುವಂತೆ ಮಾಡುವುದರಿಂದಾಗಿ ಸಾರ್ವಜನಿಕ ಹಿತಾಸಕ್ತಿಗೆ ಧಕ್ಕೆ ಬರುವ ರೀತಿಯಲ್ಲಿ ಅನರ್ಹ ಸರ್ಕಾರಿ ನೌಕರರು ಬಡ್ತಿ ಹುದ್ದೆಗಳಲ್ಲಿ ಅಥವಾ ಪದಗಳಲ್ಲಿ ಮುಂದುವರಿಯುವಂತೆ ಆಗುವುದರಿಂದ;

ಮತ್ತು ಸದರಿ ಪರಿಣಾಮಗಳ ವಿರುದ್ಧ ಉಪಬಂಧ ಕಲ್ಪಿಸುವುದು ಅಗತ್ಯ ಮತ್ತು ಯುಕ್ತವಾಗಿರುವುದರಿಂದ;

ಮತ್ತು ಭಾರತ ಸರ್ಕಾರ, ಮಂತ್ರಿ ಮಂಡಲ ಸಚಿವಾಲಯ, ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆಯ ಪತ್ರ ಸಂಖ್ಯೆ 5.5.73 ಎಸ್ ಆರ್ (ಎಸ್) ದಿನಾಂಕ 22ನೇ ಫೆಬ್ರವರಿ 1973ರಲ್ಲಿ ತಿಳಿಸಿರುವಂತೆ ರಾಜ್ಯಗಳ ಪುನಾರಚನಾ ಅಧಿನಿಯಮ, 1956ರ (1956ರ ಕೇಂದ್ರಾಧಿನಿಯಮ 37) 115ನೇ ಪ್ರಕರಣದ (7)ನೇ ಉಪ ಪ್ರಕರಣದ ಪರಂತುಕದ ಅಡಿಯಲ್ಲಿ ಕೇಂದ್ರ ಸರ್ಕಾರವು ಪೂರ್ವಾನುಮೋದನೆಯನ್ನು ನೀಡಿರುವುದರಿಂದ; -

ಭಾರತ ಗಣರಾಜ್ಯದ ಇಪ್ಪತ್ತನಾಲ್ಕನೇ ವರ್ಷದಲ್ಲಿ [1][ಕರ್ನಾಟಕ][1] ವಿಧಾನ ಮಂಡಲದಿಂದ ಈ ಮುಂದಿನಂತೆ ಅಧಿನಿಯಮಿತವಾಗತಕ್ಕದ್ದು:

1. 1976ರ ಅಧಿನಿಯಮ 40 ಮತ್ತು 1982ರ ಅಧಿನಿಯಮ 25 ರ ಮೂಲಕ 11.04.1974 ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.

**1. ಸಂಕ್ಷಿಪ್ತ ಹೆಸರು ಮತ್ತು ಪ್ರಾರಂಭ:-** (1) ಈ ಅಧಿನಿಯಮವನ್ನು [1][ಕರ್ನಾಟಕ][1] ರಾಜ್ಯ ಸಿವಿಲ್ ಸೇವಾ (ಬಡ್ತಿ, ವೇತನ ಮತ್ತು ನಿವೃತ್ತಿ ವೇತನ ವಿನಿಯಮನ) ಅಧಿನಿಯಮ, 1973 ಎಂದು ಕರೆಯತಕ್ಕದ್ದು.

1. 1976ರ ಅಧಿನಿಯಮ 40 ಮತ್ತು 1982ರ ಅಧಿನಿಯಮ 25 ರ ಮೂಲಕ 11.04.1974 ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.

(2) ಈ ಪ್ರಕರಣವು ಮತ್ತು 2,4,5,6,7,8,9,10 ಮತ್ತು 12ನೇ ಪ್ರಕರಣಗಳು 1956ರ ನವೆಂಬರ್ ತಿಂಗಳ ಮೊದಲನೆಯ ದಿನಾಂಕದಂದು ಜಾರಿಗೆ ಬಂದಿರುವುದಾಗಿ ಭಾವಿಸತಕ್ಕದ್ದು ಮತ್ತು ಉಳಿದ ಪ್ರಕರಣಗಳು ಈ ಕೂಡಲೇ ಜಾರಿಗೆ ಬರತಕ್ಕದ್ದು.

**2. ಪರಿಭಾಷೆಗಳು:-** ಈ ಅಧಿನಿಯಮದಲ್ಲಿ ಸಂದರ್ಭವು ಅನ್ಯಥಾ ಅಗತ್ಯ ಪಡಿಸಿದ ಹೊರತು,-

(ಎ) "ಹಂಚಿಕೆ ಮಾಡಲಾದವನು" ಎಂದರೆ, ರಾಜ್ಯಗಳ ಪುನಾರಚನಾ ಅಧಿನಿಯಮ, 1956ರ (1956ರ ಕೇಂದ್ರಧಿನಿಯಮ 37) ಅಡಿಯಲ್ಲಿ ಅಥವಾ 115ನೇ ಪ್ರಕರಣಕ್ಕೆ ಅನುಸಾರವಾಗಿ [1][ಕರ್ನಾಟಕ][1] ರಾಜ್ಯ ಸರ್ಕಾರದ ವ್ಯವಹಾರಗಳಿಗೆ ಸಂಬಂಧಿಸಿದಂತೆ ಸೇವೆ ಸಲ್ಲಿಸಲು ಹಂಚಿಕೆ ಮಾಡಲಾದ ಅಥವಾ ಹಂಚಿಕೆ ಮಾಡಲಾದವನೆಂದು ಭಾವಿಸಲಾದ ಒಬ್ಬ ಸರ್ಕಾರಿ ನೌಕರ;

1. 1976ರ ಅಧಿನಿಯಮ 40 ಮತ್ತು 1982ರ ಅಧಿನಿಯಮ 25 ರ ಮೂಲಕ 11.04.1974 ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.

(ಬಿ) "ಸರ್ಕಾರಿ ನೌಕರ" ಎಂದರೆ [1][ಕರ್ನಾಟಕ][1] ರಾಜ್ಯದ ಸರ್ಕಾರಿ ಸೇವೆಯ ಸದಸ್ಯನಾಗಿರುವ ಅಥವಾ [1][ಕರ್ನಾಟಕ][1] ರಾಜ್ಯದಲ್ಲಿ ಸಿವಿಲ್ ಹುದ್ದೆಯನ್ನು ಧಾರಣ ಮಾಡಿರುವ ಒಬ್ಬ ವ್ಯಕ್ತಿ ಮತ್ತು ಇದು ಹಂಚಿಕೆ ಮಾಡಲಾದವನನ್ನು ಒಳಗೊಳ್ಳುತ್ತದೆ;

1. 1976ರ ಅಧಿನಿಯಮ 40 ಮತ್ತು 1982ರ ಅಧಿನಿಯಮ 25 ರ ಮೂಲಕ 11.04.1974 ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.

(ಸಿ) "ಅಂತಿಮ ಜೇಷ್ಠತಾ ಪಟ್ಟಿ" ಎಂದರೆ, ರಾಜ್ಯಗಳ ಪುನಾರಚನಾ ಅಧಿನಿಯಮ, 1956ರ (1956ರ ಕೇಂದ್ರಾಧಿನಿಯಮ 37) 115ನೇ ಪ್ರಕರಣದ (5)ನೇ ಉಪ ಪ್ರಕರಣದ ಉಪಬಂಧಗಳ ಅಡಿಯಲ್ಲಿ ಕೇಂದ್ರ ಸರ್ಕಾರದ ತೀರ್ಮಾನಗಳಿಗನುಸಾರವಾಗಿ ಸಿದ್ಧಪಡಿಸಲಾದ ಹಂಚಿಕೆ ಮಾಡಲಾದವರ ಅಂತರರಾಜ್ಯ ಜೇಷ್ಠತಾ ಪಟ್ಟಿ;

(ಡಿ) "ಅಂತರ-ರಾಜ್ಯ ಜೇಷ್ಠತಾಪಟ್ಟಿ" ಎಂದರೆ, ಉನ್ನತ ಹುದ್ದೆ ಅಥವಾ ಹುದ್ದೆಗಳಿಗೆ ಬಡ್ತಿಗಾಗಿ ಹಂಚಿಕೆ ಮಾಡಲಾದವರ ಅರ್ಹತೆಯನ್ನು ಪರಿಗಣಿಸುವ, ಜೇಷ್ಠತೆಯ ಆಧಾರದ ಮೇಲೆ ಕಾಲಕಾಲಕ್ಕೆ ಸಿದ್ಧಪಡಿಸಲಾಗುವ ಒಂದು ಅಂತರ ರಾಜ್ಯ ಜೇಷ್ಠತಾ ಪಟ್ಟಿ ;

(ಇ) " ನೇಮಕಾತಿ ನಿಯಮಗಳು" ಎಂದರೆ, ಯಾವುದೇ ಸೇವೆಗೆ, ಹುದ್ದೆಗೆ, ಪದಕ್ಕೆ ಅಥವಾ ಹುದ್ದೆಗಳ ಅಥವಾ ಪದಗಳ ವರ್ಗಕ್ಕೆ ನೇಮಕಾತಿಯ ಸಂಬಂಧದಲ್ಲಿ ಮಾಡಲಾದ ನೇಮಕಾತಿ ನಿಯಮಗಳು.

**3. ಸಿವಿಲ್ ನೌಕರರ ಬಡ್ತಿ ಇತ್ಯಾದಿಗಳು:-** (1) ಯಾರೇ ಸಿವಿಲ್ ನೌಕರನು,-

[1][(ಎ) ಈ ಅಧಿನಿಯಮದ ಅಡಿಯಲ್ಲಿ ರಚಿಸಲಾದ ನಿಯಮಗಳಲ್ಲಿ ನಿರ್ದಿಷ್ಟಪಡಿಸಿರುವುದನ್ನು ಹೊರತು ಪಡಿಸಿ ಮತ್ತು ಅಷ್ಟರ ಮಟ್ಟಿಗೆ ಯಾವುದೇ ಹುದ್ದೆಗೆ ಅಥವಾ ಪದಕ್ಕೆ ಒಂದು ಪೂರ್ವಾನ್ವಯ ದಿನಾಂಕದಿಂದ ಪರಿಣಾಮಕಾರಿಯಾಗುವಂತೆ ಬಡ್ತಿಗೆ ಹಕ್ಕುಳ್ಳವನಾಗಿರತಕ್ಕದ್ದಲ್ಲ.][1]

1. 1976ರ ಅಧಿನಿಯಮ 40 ಮತ್ತು 1982ರ ಅಧಿನಿಯಮ 25 ರ ಮೂಲಕ 11.04.1974 ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.

(ಬಿ) ಬಡ್ತಿ ನೀಡುವ ಸಕ್ಷಮ ಪ್ರಾಧಿಕಾರವು, ಆತನ ಬಡ್ತಿಗೆ ಸಂಬಂಧಿಸಿದಂತೆ ಅವನ ಅರ್ಹತೆಯನ್ನು ನಿರ್ಧರಿಸಿದ ಹೊರತು ಮತ್ತು ಅಂಥ ಹುದ್ದೆ ಅಥವಾ ಪದದಲ್ಲಿ ಸ್ಥಾನಾಪನ್ನನಾಗಿರಲು ಒಂದು ಲಿಖಿತ ಆದೇಶದ ಮೂಲಕ ಬಡ್ತಿ ನೀಡಿದ ಹೊರತು ಜ್ಯೇಷ್ಠತಾ ಪಟ್ಟಿಯಲ್ಲಿನ ಅವನ ಜ್ಯೇಷ್ಠತೆಯ ಆಧಾರದ ಮೇಲೆ ಮಾತ್ರ ಅವನಿಗೆ ಬಡ್ತಿ ನೀಡತಕ್ಕದ್ದಲ್ಲ ಮತ್ತು ಅಂಥ ಯಾರೇ ಸಿವಿಲ್ ನೌಕರನು 9ನೇ ಪ್ರಕರಣದಲ್ಲಿ ಉಪಬಂಧಿಸಿರುವುದನ್ನುಳಿದು, ಅಂಥ ಹುದ್ದೆ ಅಥವಾ ಪದದಲ್ಲಿ ಅಂಥ ಸರ್ಕಾರಿ ನೌಕರನ ಕಾರ್ಯವನ್ನು ನಿರ್ಧರಿಸಿ ಅವನು ತನ್ನ ಸ್ಥಾನಾಪನ್ನ ಅವಧಿಯನ್ನು ತೃಪ್ತಿಕರವಾಗಿ ಪೂರೈಸಿದ್ದಾನೆಂದು ಸದರಿ ಪ್ರಾಧಿಕಾರವು ಲಿಖಿತ ಆದೇಶದಲ್ಲಿ ಘೋಷಿಸಿದ ಹೊರತು, ಅಂಥ ಬಡ್ತಿ ಹುದ್ದೆಯಲ್ಲಿ ಅಥವಾ ಪದದಲ್ಲಿ ಮುಂದುವರಿಯಲು ಹಕ್ಕುಳ್ಳವನಾಗಿರತಕ್ಕದ್ದಲ್ಲ.

(ಸಿ) 9ನೇ ಪ್ರಕರಣದಲ್ಲಿ ಉಪಬಂಧಿಸಿರುವುದನ್ನುಳಿದು, ಯಾವುದೇ ಹುದ್ದೆ ಅಥವಾ ಪದದಲ್ಲಿ ಸ್ಥಾನಾಪನ್ನನಾಗಿರಲು ಬಡ್ತಿ ನೀಡಿದಾಗ ಪ್ರಥಮವಾಗಿ ಬಡ್ತಿ ಪಡೆದ ಹುದ್ದೆಯಲ್ಲಿ ಅಥವಾ ಪದದಲ್ಲಿ ಅವನ ಸ್ಥಾನಾಪನ್ನತೆಯ ಅವಧಿಯನ್ನು ತೃಪ್ತಿಕರವಾಗಿ ಪೂರೈಸಿದ್ದಾನೆಂದು ಘೋಷಿಸದ ಹೊರತು ಮುಂದಿನ ಉನ್ನತ ಹುದ್ದೆಗೆ ಅಥವಾ ಪದಕ್ಕೆ ಬಡ್ತಿಗಾಗಿ ಪರಿಗಣಿಸಲು ಹಕ್ಕುಳ್ಳವನಾಗಿರತಕ್ಕದ್ದಲ್ಲ.

(2) (1)ನೇ ಉಪ ಪ್ರಕರಣದಲ್ಲಿ ನಿರ್ದಿಷ್ಟಪಡಿಸದಿರುವ ವಿಷಯಗಳಿಗೆ ಸಂಬಂಧಿಸಿದಂತೆ 4,5,6,7 ಮತ್ತು 8ನೇ ಪ್ರಕರಣಗಳಲ್ಲಿ ಇರುವ ಉಪಬಂಧಗಳು ಯಥೋಚಿತ ವ್ಯತ್ಯಾಸಗಳೊಂದಿಗೆ ಅನ್ವಯವಾಗತಕ್ಕದ್ದು.

**4. ಹಂಚಿಕೆ ಮಾಡಲಾದವರ ಬಡ್ತಿ, ಮುಂತಾದವುಗಳು:-** (1) ಯಾವುದೇ ಹುದ್ದೆಯಲ್ಲಿ ಅಥವಾ ಪದದಲ್ಲಿ ತಾತ್ಕಾಲಿಕ ಅಂತರ ರಾಜ್ಯ ಜ್ಯೇಷ್ಠತಾ ಪಟ್ಟಿಯಲ್ಲಿ ನಿರ್ದಿಷ್ಟಪಡಿಸಿರುವಂತೆ ಹಂಚಿಕೆ ಮಾಡಲಾದವನ ಜ್ಯೇಷ್ಠತೆಯನ್ನು, ಆ ವರ್ಗಕ್ಕೆ ಸಂಬಂಧಿಸಿದಂತೆ ಅಂತಿಮ ಜ್ಯೇಷ್ಠತಾ ಪಟ್ಟಿಯಲ್ಲಿ ಬದಲಾವಣೆ ಮಾಡಿದಲ್ಲಿ, ಜ್ಯೇಷ್ಠತೆ ಹಾಗೂ ಅರ್ಹತೆಯ ಆಧಾರದ ಮೇಲೆ 1956ರ ನವೆಂಬರ್ ಮೊದಲನೇ ದಿನಾಂಕದ ತರುವಾಯದ ಯಾವುದೇ ದಿನಾಂಕದಂದು ಮಾಡಲಾದ ಪ್ರತಿಯೊಂದು ಬಡ್ತಿಯನ್ನು, ಅಂಥ ಬಡ್ತಿಗೆ ಸೂಕ್ತ ಸಮಯದಲ್ಲಿ ಅನ್ವಯವಾಗುವಂಥ ನೇಮಕ ಭರ್ತಿ ನಿಯಮಗಳಲ್ಲಿ ನಿರೂಪಿಸಲಾದ ಅರ್ಹತೆಗಳು ಮತ್ತು ಇತರ ಷರತ್ತುಗಳಿಗೆ ಮತ್ತು ಆ ಹುದ್ದೆಯ ಅಥವಾ ಪದದ ವರ್ಗದಲ್ಲಿ ಹಂಚಿಕೆ ಮಾಡಲಾದವನಿಗೆ ಗೊತ್ತುಪಡಿಸಲಾದ ಅಂತಿಮ ಜ್ಯೇಷ್ಠತಾ ಪಟ್ಟಿಯಲ್ಲಿನ ಶ್ರೇಣಿಗೆ ಸಂಬಂಧಿಸಿದಂತೆ ಪರಿಷ್ಕರಿಸತಕ್ಕದ್ದು. ಅಂಥ ದಿನಾಂಕದಂದು (ಇದರಲ್ಲಿ ಇನ್ನು ಮುಂದೆ, ಈ ಪ್ರಕರಣದಲ್ಲಿ ಅರ್ಹತೆಯ ದಿನಾಂಕವೆಂದು ಉಲ್ಲೇಖಿಸಲಾಗಿದೆ) ಇತರ ಯಾರೇ ವ್ಯಕ್ತಿಯನ್ನು ಬಡ್ತಿ ಹೊಂದಿದ ವ್ಯಕ್ತಿಗಿಂತ ಶ್ರೇಣಿಯಲ್ಲಿ ಜ್ಯೇಷ್ಠನಾಗಿರುವನೆಂದು ಪರಿಗಣಿಸಿದರೆ, 9ನೇ ಪ್ರಕರಣಕ್ಕೆ ಒಳಪಟ್ಟು, ಅಂಥ ವ್ಯಕ್ತಿಯನ್ನು ಆದೇಶದಲ್ಲಿ ನಿರ್ದಿಷ್ಟಪಡಿಸಲಾಗುವ ಮುಂದಿನ ದಿನಾಂಕದಿಂದ ಪರಿಣಾಮಕಾರಿಯಾಗುವಂತೆ ಸದರಿ ಹುದ್ದೆಯಲ್ಲಿ ಅಥವಾ ಪದದಲ್ಲಿ ಸ್ಥಾನಾಪನ್ನನಾಗಿರುವಂತೆ ಬಡ್ತಿ ನೀಡಿ ಒಂದು ಆದೇಶವನ್ನು ಮಾಡತಕ್ಕದ್ದು.

(2) (1)ನೇ ಉಪ ಪ್ರಕರಣದ ಅಡಿಯಲ್ಲಿ ಬಡ್ತಿ ನೀಡಲಾದ ವ್ಯಕ್ತಿಯು ಬಡ್ತಿ ಹೊಂದಿದ ಹುದ್ದೆಯಲ್ಲಿ ಅಥವಾ ಪದದಲ್ಲಿ ಸ್ಥಾನಾಪನ್ನ ಅವಧಿಯನ್ನು ತೃಪ್ತಿಕರವಾಗಿ ಪೂರೈಸಿರುವನೆಂದು ಘೋಷಿಸಿದ ತರುವಾಯ, ಸಾಧ್ಯವಾದಷ್ಟು ಬೇಗನೆ, 9ನೇ ಪ್ರಕರಣಕ್ಕೆ ಒಳಪಟ್ಟು, ಆ ಹುದ್ದೆಯನ್ನು ಅಥವಾ ಪದವನ್ನು ಅವನು ಅದಕ್ಕೆ ಹಕ್ಕುಳ್ಳವನಾಗಿದ್ದಂಥ ದಿನಾಂಕದಿಂದ ಹೊಂದಿದ್ದನೆಂಬಂತೆ ಮತ್ತು ತದನುಸಾರವಾಗಿ ವೇತನ ಮತ್ತು ಭತ್ಯೆಗಳನ್ನು ಪಡೆದಿದ್ದನೆಂಬಂತೆ ಆ ಹುದ್ದೆಗೆ ಅಥವಾ ಪದಕ್ಕೆ ಅವನು ವಾಸ್ತವವಾಗಿ ಬಡ್ತಿ ಹೊಂದಿದ ದಿನಾಂಕದಂದು ಪ್ರಾರಂಭಿಕ ವೇತನಕ್ಕೆ ಹಕ್ಕುಳ್ಳವನಾಗಿರುವನೆಂದು ನಿರ್ದೇಶಿಸುವ ಒಂದು ಆದೇಶವನ್ನು ಹೊರಡಿಸತಕ್ಕದ್ದು, ಆದರೆ ಅಂಥ ವ್ಯಕ್ತಿಯು ತನ್ನ ವಾಸ್ತವ ಬಡ್ತಿಯ ದಿನಾಂಕದ ಹಿಂದಿನ ಅವಧಿಗಾಗಿ ಯಾವುದೇ ಬಾಕಿ ಸಂದಾಯಕ್ಕೆ ಹಕ್ಕುಳ್ಳವನಾಗಿರತಕ್ಕದ್ದಲ್ಲ. ಬಡ್ತಿ ಹೊಂದಿದ ಸೇವೆಯ ವರ್ಗ ಮತ್ತು ದರ್ಜೆಯಲ್ಲಿನ ವ್ಯಕ್ತಿಗಳ ಜ್ಯೇಷ್ಠತಾ ಪಟ್ಟಿಯಲ್ಲಿರುವ ಅವನ ಸ್ಥಾನವನ್ನು ಅವನು ಅದಕ್ಕೆ ಹಕ್ಕುಳ್ಳವನಾಗಿದ್ದ ದಿನಾಂಕದಂದು ಆ ಸೇವೆಯ ವರ್ಗ ಮತ್ತು ದರ್ಜೆಯಲ್ಲಿ ಅವನು ಬಡ್ತಿ ಹೊಂದಿದ್ದರೆ ಹೇಗೋ ಹಾಗೆ ನಿಗದಿಪಡಿಸತಕ್ಕದ್ದು.

(3) (1)ನೇ ಉಪ ಪ್ರಕರಣದ ಅಡಿಯಲ್ಲಿ ಮಾಡಲಾದ ಬಡ್ತಿಗಳ ಪರಿಷ್ಕರಣೆಯ ಪರಿಣಾಮವಾಗಿ, 3,11 ಮತ್ತು 13ನೇ ಪ್ರಕರಣಗಳು ಜಾರಿಗೆ ಬರುವುದಕ್ಕಿಂತ ಮುಂಚೆ ಸೇವೆಯ ಉನ್ನತ ವರ್ಗಕ್ಕೆ ಅಥವಾ ದರ್ಜೆಗೆ ಬಡ್ತಿ ಹೊಂದಿದ ವಾಸ್ತವ ದಿನಾಂಕಕ್ಕೆ ಮುಂಚೆ, ಒಬ್ಬ ಹಂಚಿಕೆ ಮಾಡಲಾದವನು ಆ ಉನ್ನತ ವರ್ಗಕ್ಕೆ ಅಥವಾ ದರ್ಜೆಗೆ ಬಡ್ತಿ ಹೊಂದಲು ಹಕ್ಕುಳ್ಳವನಾಗುತ್ತಿದ್ದನೆಂದು ಮತ್ತು 9ನೇ ಪ್ರಕರಣಕ್ಕೆ ಒಳಪಟ್ಟು, ಬಡ್ತಿ ಹೊಂದಿದ ಹುದ್ದೆಯಲ್ಲಿ ಅಥವಾ ಪದದಲ್ಲಿ ಸ್ಥಾನಾಪನ್ನ ಅವಧಿಯನ್ನು ತೃಪ್ತಿಕರವಾಗಿ ಪೂರೈಸಿರುವನೆಂದು ಕಂಡು ಬಂದಲ್ಲಿ, ಅವನು ಬಡ್ತಿಗೆ ಹಕ್ಕುಳ್ಳವನೆಂದು ಕಂಡು ಬಂದ ದಿನಾಂಕದಿಂದ ಸದರಿ ಹುದ್ದೆಯನ್ನು ಅಥವಾ ಪದವನ್ನು ಹೊಂದಿದ್ದನೆಂಬಂತೆ ಮತ್ತು ತದನುಸಾರವಾಗಿ ವೇತನ ಮತ್ತು ಭತ್ಯೆಗಳನ್ನು ಪಡೆದಿದ್ದನೆಂಬಂತೆ ಆ ಹುದ್ದೆಗೆ ಅಥವಾ ಪದಕ್ಕೆ ವಾಸ್ತವವಾಗಿ ಬಡ್ತಿ ಹೊಂದಿದ ದಿನಾಂಕದಂದು ಪ್ರಾರಂಭಿಕ ವೇತನಕ್ಕೆ ಹಕ್ಕುಳ್ಳವನಾಗಿರುವನೆಂದು ನಿರ್ದೇಶಿಸುವ ಒಂದು ಆದೇಶವನ್ನು ಹೊರಡಿಸತಕ್ಕದ್ದು ಆದರೆ, ಅವನು ತನ್ನ ವಾಸ್ತವ ಬಡ್ತಿಯ ದಿನಾಂಕದ ಹಿಂದಿನ ಅವಧಿಗಾಗಿ ಯಾವುದೇ ಬಾಕಿ ಸಂದಾಯಕ್ಕೆ ಹಕ್ಕುಳ್ಳವನಾಗಿರತಕ್ಕದ್ದಲ್ಲ. [1][ಅಂಥ ಪರಿಷ್ಕರಣೆಯ ತರುವಾಯ, ಸೇವೆಯ ಅಂಥ ವರ್ಗಕ್ಕೆ ಅಥವಾ ದರ್ಜೆಗೆ ವಾಸ್ತವವಾಗಿ ಆದ ಬಡ್ತಿಯ ದಿನಾಂಕದ ತರುವಾಯದ ದಿನಾಂಕದಿಂದ ಸೇವೆಯ ಉನ್ನತ ವರ್ಗಕ್ಕೆ ಅಥವಾ ದರ್ಜೆಗೆ ಬಡ್ತಿ ಹೊಂದಲು ಹಕ್ಕುಳ್ಳವನಾಗುತ್ತಿದ್ದನೆಂದು ಕಂಡು ಬಂದಲ್ಲಿ, ಅವನ ವೇತನವನ್ನು, ಹಕ್ಕುಳ್ಳವನಾದ ದಿನಾಂಕದಿಂದ ಅಂಥ ದಿನಾಂಕದಂದು ಅವನು ಬಡ್ತಿ ಹೊಂದಿರುವನೆಂಬಂತೆ ಪುನರ್ ನಿಗದಿಗೊಳಿಸತಕ್ಕದ್ದು, ಆದರೆ ಹಕ್ಕುಳ್ಳ ದಿನಾಂಕವನ್ನು ನಿಗದಿಪಡಿಸಿ ಹೊರಡಿಸಲಾದ ಆದೇಶದ ದಿನಾಂಕದವರೆಗೆ ಅವನು ಪಡೆದ ಹೆಚ್ಚುವರಿ ವೇತನ ಮತ್ತು ಭತ್ಯೆಗಳನ್ನು ಮರುಪಾವತಿ ಮಾಡಲು ಅವನು ಬದ್ಧನಾಗಿರತಕ್ಕದ್ದಲ್ಲ.][1] ಅವನು ಬಡ್ತಿ ಹೊಂದಿದ ಸೇವೆಯ ವರ್ಗದಲ್ಲಿನ ಅಥವಾ ದರ್ಜೆಯಲ್ಲಿನ ವ್ಯಕ್ತಿಗಳ ಜ್ಯೇಷ್ಠತಾ ಪಟ್ಟಿಯಲ್ಲಿರುವ ಅವನ ಶ್ರೇಣಿಯನ್ನು ಅವನು ಬಡ್ತಿ ಹೊಂದಲು ಹಕ್ಕು ಪಡೆದ ದಿನಾಂಕದಿಂದ ಆ ಸೇವೆಯ ವರ್ಗಕ್ಕೆ ಅಥವಾ ದರ್ಜೆಗೆ ಬಡ್ತಿ ಹೊಂದಿರುವನೆಂಬಂತೆ ನಿಗದಿಪಡಿಸತಕ್ಕದ್ದು.

1. 1982ರ ಅಧಿನಿಯಮ 25ರ ಮೂಲಕ 1.11.1956ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.

(4) (2)ನೇ ಉಪ-ಪ್ರಕರಣದ ಅಡಿಯಲ್ಲಿ ಅಥವಾ ಸಂದರ್ಭಾನುಸಾರ (3)ನೇ ಉಪ ಪ್ರಕರಣದ ಅಡಿಯಲ್ಲಿ ಯಾರೇ ಹಂಚಿಕೆ ಮಾಡಲಾದವನ ಸಂಬಂಧವಾಗಿ ಒಂದು ಆದೇಶವನ್ನು ಹೊರಡಿಸಿರುವಲ್ಲಿ ಮತ್ತು ಅಂಥ ಆದೇಶದಲ್ಲಿ ನಿಗದಿಪಡಿಸಲಾದಂತೆ ಬಡ್ತಿ ಪಡೆದ ಸೇವೆಯ ವರ್ಗದಲ್ಲಿನ ಅಥವಾ ದರ್ಜೆಯಲ್ಲಿನ ವ್ಯಕ್ತಿಗಳ ಜ್ಯೇಷ್ಠತಾ ಪಟ್ಟಿಯಲ್ಲಿರುವ ಶ್ರೇಣಿಯನ್ನು ಪರಿಷ್ಕರಿಸಿದಲ್ಲಿ, ಆ ಸೇವೆಯ ವರ್ಗದಿಂದ

ಅಥವಾ ದರ್ಜೆಯಿಂದ ಸೇವೆಯ ಮುಂದಿನ ಉನ್ನತ ವರ್ಗ ಅಥವಾ ಶ್ರೇಣಿಗೆ ಮಾಡಲಾದ ಬಡ್ತಿಯನ್ನು, ಅಂತಿಮ ಜ್ಯೇಷ್ಠತಾ ಪಟ್ಟಿಗೆ ಸಂಬಂಧಿಸಿದಂತೆ ಅದರಲ್ಲಿನ ಉಲ್ಲೇಖಗಳು, ಮೇಲೆ ಹೇಳಿದ ಪರಿಷ್ಕೃತ ಜ್ಯೇಷ್ಠತಾ ಪಟ್ಟಿಯ ಉಲ್ಲೇಖಗಳೆಂಬಂತೆ (1)ನೇ ಉಪ ಪ್ರಕರಣದ ಉಪಬಂಧಕ್ಕನುಸಾರವಾಗಿ ಮತ್ತು ಅದಕ್ಕೆ ಒಳಪಟ್ಟು ಪರಿಷ್ಕರಿಸತಕ್ಕದ್ದು ಮತ್ತು (2)ನೇ ಉಪ ಪ್ರಕರಣದ ಉಪ ಬಂಧಗಳು ಹಾಗೆ ಮಾಡಲಾದ ಪ್ರತಿಯೊಂದು ಬಡ್ತಿಗೆ ಯಥೋಚಿತ ವ್ಯತ್ಯಾಸಗಳೊಂದಿಗೆ ಅನ್ವಯವಾಗತಕ್ಕದ್ದು.

(5) (4)ನೇ ಉಪ ಪ್ರಕರಣದ ಉಪಬಂಧಗಳು, ಒಂದೇ ಸೇವೆಯ ಮುಂದಿನ ಉನ್ನತ ವರ್ಗಗಳಿಗೆ ಅಥವಾ ದರ್ಜೆಗಳಿಗೆ ಹಂಚಿಕೆ ಪಡೆದವನ ಬಡ್ತಿಗೆ ಸಂಬಂಧಿಸಿದಂತೆ ಯಥೋಚಿತ ವ್ಯತ್ಯಾಸಗಳೊಂದಿಗೆ ಅನ್ವಯವಾಗತಕ್ಕದ್ದು.

(6) (3)ನೇ ಉಪ ಪ್ರಕರಣದ ಉಪಬಂಧಗಳು, (4) ಮತ್ತು (5)ನೇ ಉಪ ಪ್ರಕರಣಗಳ ಅಡಿಯಲ್ಲಿ ಮಾಡಲಾದ ಹಂಚಿಕೆ ಮಾಡಲಾದವನ ಬಡ್ತಿಯ ಪರಿಷ್ಕರಣೆಗೆ ಸಂಬಂಧಿಸಿದಂತೆ ಯಥೋಚಿತ ವ್ಯತ್ಯಾಸಗಳೊಂದಿಗೆ ಅನ್ವಯವಾಗತಕ್ಕದ್ದು.

(7) ಸೇವೆಯ ಯಾವುದೇ ವರ್ಗದಿಂದ ಅಥವಾ ದರ್ಜೆಯಿಂದ ಮುಂದಿನ ಉನ್ನತ ವರ್ಗಕ್ಕೆ ಅಥವಾ ದರ್ಜೆಗೆ ಜ್ಯೇಷ್ಠತೆ ಹಾಗೂ ಅರ್ಹತೆಯ ಆಧಾರದ ಮೇಲೆ ಮಾಡಲಾಗುವ ಬಡ್ತಿಗೆ ಸಂಬಂಧಿಸಿದಂತೆ, ನೇಮಕ ಭರ್ತಿ ನಿಯಮಗಳು ಬಡ್ತಿಗಾಗಿ ಅರ್ಹತೆಯನ್ನು ಪಡೆಯಲು ಹಿಂದಿನ ವರ್ಗ ಅಥವಾ ದರ್ಜೆಯಲ್ಲಿ ಕನಿಷ್ಠ ಅವಧಿಯ ಸೇವೆಯನ್ನು ಅಗತ್ಯಪಡಿಸಿದಲ್ಲಿ, ಈ ಪ್ರಕರಣದ ಅಡಿಯಲ್ಲಿ ಬಡ್ತಿಗೆ ಹಕ್ಕು ಹೊಂದಲು ಹಂಚಿಕೆ ಮಾಡಲಾದವನಿಗೆ ಅನ್ವಯಿಸುವ ಸದರಿ ಅವಧಿಯನ್ನು, ಸೇವೆಯ ಆ ವರ್ಗದ ಅಥವಾ ದರ್ಜೆಯ ಹುದ್ದೆಯಲ್ಲಿ ಅಥವಾ ಪದದಲ್ಲಿ ಸ್ಥಾನಾಪನ್ನ ಅವಧಿಯನ್ನು ತೃಪ್ತಿಕರವಾಗಿ ಪೂರೈಸಿದ ಅವಧಿ ಎಂದು ಭಾವಿಸತಕ್ಕದ್ದು ಮತ್ತು ಬಡ್ತಿಗೆ ಹಕ್ಕು ಪಡೆದ ಸಂಬಂಧಪಟ್ಟ ದಿನಾಂಕ ಅಥವಾ ದಿನಾಂಕಗಳಂದು, ಸೇವೆಯ ದಾಖಲೆಯು ತೃಪ್ತಿಕರವಾಗಿರುವಂಥ ಹಂಚಿಕೆ ಮಾಡಲಾದವನ ಸಂದರ್ಭದಲ್ಲಿ ಅಂಥ ಯಾವುದೇ ಕನಿಷ್ಠ ಸೇವೆಯ ಅವಶ್ಯಕತೆ ಇರತಕ್ಕದ್ದಲ್ಲ.

(8) ಆಯ್ಕೆ ಮೂಲಕ ಮಾಡಲಾಗುವ ಸೇವೆಯ ಯಾವುದೇ ವರ್ಗದಿಂದ ಅಥವಾ ದರ್ಜೆಯಿಂದ ಸೇವೆಯ ಮುಂದಿನ ಉನ್ನತ ವರ್ಗಕ್ಕೆ ಅಥವಾ ದರ್ಜೆಗೆ ನೀಡುವ ಬಡ್ತಿಗೆ ಸಂಬಂಧಿಸಿದಂತೆ, ಅಂತಿಮ ಜ್ಯೇಷ್ಠತಾ ಪಟ್ಟಿಯಲ್ಲಿನ ತನ್ನ ಜ್ಯೇಷ್ಠತೆಯ ಆಧಾರದ ಮೇಲೆ ಸೇವೆಯ ಮೊದಲಿನ ವರ್ಗದಲ್ಲಿ ಅಥವಾ ದರ್ಜೆಗೆ ಬಡ್ತಿ ನೀಡಿದ್ದಿದ್ದರೆ ಒಬ್ಬ ಹಂಚಿಕೆ ಮಾಡಲಾದವನನ್ನು, ಪರಿಗಣನೆಗೆ ತೆಗೆದುಕೊಳ್ಳಬಹುದಾಗಿದ್ದರೆ ಅಂಥ ಹಂಚಿಕೆ ಪಡೆದವನನ್ನು 9ನೇ ಪ್ರಕರಣಕ್ಕೆ ಒಳಪಟ್ಟು, ಸೇವೆಯ ಸದರಿ ಮೊದಲಿನ ವರ್ಗದಲ್ಲಿ ಅಥವಾ ದರ್ಜೆಯಲ್ಲಿ ಸ್ಥಾನಾಪನ್ನ ಅವಧಿಯನ್ನು ಅವನು ತೃಪ್ತಿಕರವಾಗಿ ಪೂರೈಸಿದ ತರುವಾಯ, ಕೂಡಲೇ, ಸೇವೆಯ ಮುಂದಿನ ಉನ್ನತ ವರ್ಗಕ್ಕೆ ಅಥವಾ ದರ್ಜೆಗೆ ಆಯ್ಕೆ ಹೊಂದಲು ಪರಿಗಣಿಸತಕ್ಕದ್ದು. ಅವನು ಸೇವೆಯ ಉನ್ನತ ವರ್ಗಕ್ಕೆ ಅಥವಾ ದರ್ಜೆಗೆ ಆಯ್ಕೆಗೊಂಡು ಬಡ್ತಿ ಹೊಂದಿದರೆ ಮತ್ತು ಸದರಿ ವರ್ಗದಲ್ಲಿ ಅಥವಾ ದರ್ಜೆಯಲ್ಲಿ ಸ್ಥಾನಾಪನ್ನ ಅವಧಿಯನ್ನು ತೃಪ್ತಿಕರವಾಗಿ ಪೂರೈಸಿದರೆ ಕೆಳಗಿನ ವರ್ಗ ಅಥವಾ ದರ್ಜೆಯಲ್ಲಿನ ಅವನ ನಿಕಟ ಕಿರಿಯನು ಸೇವೆಯ ಸದರಿ ವರ್ಗಕ್ಕೆ ಅಥವಾ ದರ್ಜೆಗೆ ಬಡ್ತಿ ಹೊಂದಿದ ದಿನಾಂಕದಿಂದ ಸದರಿ ಹುದ್ದೆಯನ್ನು ಅಥವಾ ಪದವನ್ನು ಅವನು ಹೊಂದಿದ್ದನೆಂಬಂತೆ ಸೇವೆಯ ಸದರಿ ಹುದ್ದೆಗೆ ಅಥವಾ ದರ್ಜೆಗೆ ವಾಸ್ತವವಾಗಿ ಬಡ್ತಿ ಹೊಂದಿದ ದಿನಾಂಕದಿಂದ ಪ್ರಾರಂಭಿಕ ವೇತನವನ್ನು ಪಡೆಯಲು ಹಕ್ಕುಳ್ಳವನಾಗಿರತಕ್ಕದ್ದು. ಆದರೆ ಅವನು ವಾಸ್ತವವಾಗಿ ಬಡ್ತಿಯನ್ನು ಪಡೆದ ದಿನಾಂಕದಿಂದ ಹಿಂದಿನ ಅವಧಿಗೆ ಯಾವುದೇ ಬಾಕಿ ಸಂದಾಯಕ್ಕೆ ಹಕ್ಕುಳ್ಳವನಾಗಿರತಕ್ಕದ್ದಲ್ಲ. ಸದರಿ ವರ್ಗ ಅಥವಾ ದರ್ಜೆಯಲ್ಲಿನ ವ್ಯಕ್ತಿಗಳ ಜ್ಯೇಷ್ಠತಾ ಪಟ್ಟಿಯಲ್ಲಿರುವ ಆತನ ಶ್ರೇಣಿಯನ್ನು, ಕೆಳಗಿನ ವರ್ಗದಲ್ಲಿ ಅಥವಾ ದರ್ಜೆಯಲ್ಲಿ ಅವನ ನಿಕಟ ಕಿರಿಯನು, ಸೇವೆಯ ಆಯ್ಕೆ ವರ್ಗಕ್ಕೆ ಅಥವಾ ದರ್ಜೆಗೆ ಬಡ್ತಿ ಹೊಂದಿದ ದಿನಾಂಕದ ನಿಕಟ ಪೂರ್ವದ ದಿನಾಂಕದಂದು ಅವನು ಬಡ್ತಿ ಹೊಂದಿದ್ದನೆಂಬಂತೆ ನಿಗದಿಪಡಿಸತಕ್ಕದ್ದು.

(9) ಕಾಲಿಕವೇತನ ಶ್ರೇಣಿಯಲ್ಲಿ ಕೆಳಗಿನ ಹಂತಕ್ಕೆ ಇಳಿಸಲಾಗಿರುವ ಮತ್ತು ಬಡ್ತಿಯನ್ನು ತಡೆಹಿಡಿಯಲಾಗಿರುವಂಥ ಒಬ್ಬ ಹಂಚಿಕೆ ಮಾಡಲಾಗಿರುವವನ ಸಂಬಂಧದಲ್ಲಿ (2)ನೇ ಉಪ ಪ್ರಕರಣದ ಅಡಿಯಲ್ಲಿನ ಆದೇಶವು ರಾಜ್ಯ ಸರ್ಕಾರವು ನಿರ್ದೇಶಿಸಬಹುದಾದಂಥ ಮಾರ್ಪಾಟಿಗೆ ಒಳಪಟ್ಟಿರತಕ್ಕದ್ದು.

(10) ಹಂಚಿಕೆ ಮಾಡಲಾದವನ ಯಾವುದೇ ಬಡ್ತಿಯನ್ನು ಅಂತಿಮ ಜ್ಯೇಷ್ಠತಾ ಪಟ್ಟಿಯನ್ನು ಪ್ರಕಟಿಸಿದ ತರುವಾಯವಲ್ಲದೆ ಮತ್ತು ಈ ಪ್ರಕರಣದಲ್ಲಿ ಉಪಬಂಧಿಸಿರುವ ರೀತಿಯಲ್ಲಲ್ಲದೆ, ಯಾವುದೇ ತಾತ್ಕಾಲಿಕ ಅಂತರ ರಾಜ್ಯ ಜ್ಯೇಷ್ಠತಾ ಪಟ್ಟಿಯ ಆಧಾರದ ಮೇಲೆ ಮಾಡತಕ್ಕದ್ದಲ್ಲ.

ವಿವರಣೆ:– ಈ ಉಪ ಪ್ರಕರಣದ ಉದ್ದೇಶಗಳಿಗಾಗಿ, ತಾತ್ಕಾಲಿಕ ಅಂತರ ರಾಜ್ಯ ಜ್ಯೇಷ್ಠತಾ ಪಟ್ಟಿಯು, ಅಂತಿಮ ಜ್ಯೇಷ್ಠತಾ ಪಟ್ಟಿಯನ್ನು ಪ್ರಕಟಿಸುವವರೆಗೆ ಕಾರ್ಯ ಪ್ರವರ್ತನೆಯಲ್ಲಿರುವಂತೆ, ದಿನನಿತ್ಯದ ಆಡಳಿತವನ್ನು ನಡೆಸಲು ಆಧಾರವಾಗಿ ಉಪಯೋಗಿಸುವ, ರಾಜ್ಯ ಸರ್ಕಾರದಿಂದ ಸಿದ್ಧಪಡಿಸಲಾದ ಅಥವಾ ನ್ಯಾಯಾಲಯದಿಂದ ಘೋಷಿಸಲಾದ ಪ್ರತಿಯೊಂದು ಅಂತರ ರಾಜ್ಯ ಜ್ಯೇಷ್ಠತಾ ಪಟ್ಟಿಯನ್ನು ಒಳಗೊಳ್ಳುತ್ತದೆ.

**5. ಹಂಚಿಕೆ ಮಾಡಲಾದವನನ್ನು ಹಿಂದಿನ ಸ್ಥಾನಕ್ಕೆ ಕಳುಹಿಸುವುದಕ್ಕೆ ಸಂಬಂಧಿಸಿದ ಉಪಬಂಧ:-** (1) (4)ನೇ ಪ್ರಕರಣದ ಅಡಿಯಲ್ಲಿನ ಬಡ್ತಿಗಳ ಪರಿಷ್ಕರಣೆಯ ಪರಿಣಾಮವಾಗಿ ಯಾವುವೇ ಹುದ್ದೆಗಳ ಅಥವಾ ಪದಗಳ ವರ್ಗಕ್ಕೆ ಬಡ್ತಿ ಹೊಂದಿದ ಯಾರೇ ಹಂಚಿಕೆ ಮಾಡಲಾದವನು ಆ ವರ್ಗದಲ್ಲಿ ಮುಂದುವರಿಯಲು ಹಕ್ಕುಳ್ಳವನಾಗಿಲ್ಲವೆಂದು ಕಂಡು ಬಂದಲ್ಲಿ, ಅವನನ್ನು,-

(ಎ) ಅಂತಿಮ ಜ್ಯೇಷ್ಠತಾ ಪಟ್ಟಿಯಲ್ಲಿ ಅವನ ಶ್ರೇಣಿಯ ಆಧಾರದ ಮೇಲೆ ಯಾವ ಹುದ್ದೆಗಳ ಅಥವಾ ಪದಗಳ ವರ್ಗಕ್ಕೆ ಅವನು ಬಡ್ತಿ ಹೊಂದಲು ಅರ್ಹನಾಗಿದ್ದನೋ ಅದಕ್ಕೆ, ಅಥವಾ

(ಬಿ) ಅಂತಿಮ ಜ್ಯೇಷ್ಠತಾ ಪಟ್ಟಿಯಲ್ಲಿ ಅವನ ಶ್ರೇಣಿಯ ಆಧಾರದ ಮೇಲೆ ಅವನು ಯಾವ ಹುದ್ದೆಗಳ ಅಥವಾ ಪದಗಳ ವರ್ಗದಲ್ಲಿ ಮುಂದುವರೆಯುತ್ತಿದ್ದಿರಬಹುದಾಗಿತ್ತೋ ಆ ವರ್ಗಕ್ಕೆ ಹಿಂದಿನ ಸ್ಥಾನಕ್ಕೆ ಕಳುಹಿಸತಕ್ಕದ್ದು.

(2) (1)ನೇ ಉಪ ಪ್ರಕರಣದ (ಎ) ಖಂಡದ ಅಡಿಯಲ್ಲಿ ಹಿಂದಿನ ಸ್ಥಾನಕ್ಕೆ ಕಳುಹಿಸಿದಲ್ಲಿ ಆ ಹುದ್ದೆಗಳ ಅಥವಾ ಪದಗಳ ವರ್ಗದ ಜ್ಯೇಷ್ಠತಾ ಪಟ್ಟಿಯಲ್ಲಿರುವ ಹಂಚಿಕೆ ಮಾಡಲಾದವನ ಶ್ರೇಣಿಯನ್ನು ಅಂತಿಮ ಜ್ಯೇಷ್ಠತಾ ಪಟ್ಟಿಯಲ್ಲಿರುವ ಅವನ ಶ್ರೇಣಿಯನ್ನು ಆಧರಿಸಿ ಆ ಹುದ್ದೆಗಳ ಅಥವಾ ಪದಗಳ ವರ್ಗಕ್ಕೆ ಅವನಿಗೆ ಬಡ್ತಿ ನೀಡಲಾಗಿತ್ತೆಂಬಂತೆ ಗೊತ್ತುಪಡಿಸತಕ್ಕದ್ದು.

**6. ನಿವೃತ್ತಿ ವೇತನ, ಮುಂತಾದವುಗಳ ಪರಿಷ್ಕರಣೆಗೆ ಸಂಬಂಧಿಸಿದ ಉಪಬಂಧ:-** 4ನೇ ಪ್ರಕರಣದ ಅಡಿಯಲ್ಲಿ ಬಡ್ತಿಗಳ ಪರಿಷ್ಕರಣೆಯ ಪರಿಣಾಮವಾಗಿ 4ನೇ ಪ್ರಕರಣದ (1), (3), (4), (5), (6) ಅಥವಾ (8)ನೇ ಉಪ ಪ್ರಕರಣಗಳ ಅಡಿಯಲ್ಲಿ ಒಂದು ಆದೇಶವನ್ನು ಹೊರಡಿಸುವ ಮುಂಚೆ ಅಥವಾ ಬಡ್ತಿ ಹೊಂದಿದ ಹುದ್ದೆಯಲ್ಲಿ ಅಥವಾ ಪದದಲ್ಲಿ ಅವನ ಸ್ಥಾನಾಪನ್ನ ಅವಧಿಯು ಪೂರೈಸುವ ಮುಂಚೆ ಸೇವೆಯಿಂದ ನಿವೃತ್ತನಾದ ಯಾರೇ ಹಂಚಿಕೆ ಮಾಡಲಾದವನು, 1956ರ ನವೆಂಬರ್ ಮೊದಲನೆಯ ದಿನಾಂಕದಂದು ಅಂತಿಮ ಜ್ಯೇಷ್ಠತಾ ಪಟ್ಟಿಯನ್ನು ಪ್ರಕಟಿಸಿದ್ದಿದ್ದರೆ, ಸದರಿ ಪ್ರಕರಣದ ಅಡಿಯಲ್ಲಿ ಸೇವೆಯ ಮುಂದಿನ ಉನ್ನತ ವರ್ಗಕ್ಕೆ ಅಥವಾ ದರ್ಜೆಗೆ ಬಡ್ತಿಗೆ ಹಕ್ಕುಳ್ಳವನಾಗುತ್ತಿದ್ದನೆಂದು ಕಂಡು ಬಂದಲ್ಲಿ, ಅವನ ನಿವೃತ್ತಿ ವೇತನ ಮತ್ತು ಮರಣ ಹಾಗೂ ನಿವೃತ್ತಿ ಉಪದಾನವನ್ನು, ಅಂತಿಮ ಜ್ಯೇಷ್ಠತಾ ಪಟ್ಟಿಯಲ್ಲಿನ ಮತ್ತು ಸಂಬಂಧಪಟ್ಟ ನೇಮಕ ಭರ್ತಿ ನಿಯಮಗಳಲ್ಲಿನ ಶ್ರೇಣಿ ನಿರ್ಣಯಕ್ಕೆ ಸಂಬಂಧಿಸಿದಂತೆ ಅಂಥ ಬಡ್ತಿಗೆ ಹಕ್ಕುಳ್ಳವನಾಗುತ್ತಿದ್ದನೆಂದು ಕಂಡು ಬಂದ ದಿನಾಂಕದಿಂದ ಸೇವೆಯ ಮುಂದಿನ ಉನ್ನತ ವರ್ಗಕ್ಕೆ ಅಥವಾ ದರ್ಜೆಗೆ ಬಡ್ತಿ ನೀಡಿದ್ದಿದ್ದರೆ ಯಾವ ವೇತನ ಮತ್ತು ಭತ್ಯಗಳನ್ನು ಪಡೆಯುತ್ತಿದ್ದನೋ ಹಾಗೆ ಮತ್ತು ಸದರಿ ಸೇವೆಯ ವರ್ಗದಲ್ಲಿ ಅಥವಾ ದರ್ಜೆಯಲ್ಲಿ ಸ್ಥಾನಾಪನ್ನತೆಯ ಅವಧಿಯನ್ನು ತೃಪ್ತಿಕರವಾಗಿ ಪೂರೈಸಿದ್ದರೆ ಹೇಗೋ ಹಾಗೆ ಪುನರ್ ಪರಿಶೀಲಿಸತಕ್ಕದ್ದು.

**7. ಹಂಚಿಕೆ ಮಾಡಲಾದವನ ಮೃತ ವ್ಯಕ್ತಿಯ ಉತ್ತಾರಾಧಿಕಾರಿಗಳಿಗೆ ಮಾಡಬೇಕಾದ ಸಂದಾಯಗಳಿಗೆ ಸಂಬಂಧಪಡುವ ಉಪಬಂಧಗಳು:-** 4ನೇ ಪ್ರಕರಣದ ಅಡಿಯಲ್ಲಿ ಬಡ್ತಿಗಳನ್ನು ಪರಿಷ್ಕರಣೆ ಮಾಡಿದ ಪರಿಣಾಮವಾಗಿ, 4ನೇ ಪ್ರಕರಣದ (1), (3), (4), (5), (6) ಅಥವಾ (8)ನೇ ಉಪ ಪ್ರಕರಣದ ಅಡಿಯಲ್ಲಿ ಆದೇಶವನ್ನು ಹೊರಡಿಸುವ ಮುಂಚೆ, ಅಥವಾ ಬಡ್ತಿ ಹೊಂದಿದ ಹುದ್ದೆ ಅಥವಾ ಪದದಲ್ಲಿ ಸ್ಥಾನಾಪನ್ನತೆಯ ಅವಧಿಯು ಪೂರೈಸುವದಕ್ಕಿಂತ ಮುಂಚೆ ಸೇವೆಯಲ್ಲಿದ್ದಾಗ ಅಥವಾ ನಿವೃತ್ತಿಯ ತರುವಾಯ ಯಾರೇ ಹಂಚಿಕೆ ಮಾಡಲಾದವನು ಮೃತನಾದರೆ, 1956ರ ನವೆಂಬರ್ ಮೊದಲನೆಯ ದಿನಾಂಕದಂದು ಅಂತಿಮ ಜ್ಯೇಷ್ಠತಾ ಪಟ್ಟಿಯು ಪ್ರಕಟವಾಗಿದ್ದರೆ, ಸದರಿ ಪ್ರಕರಣದ ಅಡಿಯಲ್ಲಿ ಯಾವುದೇ ದಿನಾಂಕದಂದು ಸೇವೆಯ ಮುಂದಿನ ಉನ್ನತ ವರ್ಗಕ್ಕೆ ಅಥವಾ ದರ್ಜೆಗೆ ಬಡ್ತಿಗೆ ಹಕ್ಕುಳ್ಳವನಾಗಿದ್ದಿದ್ದರೆ, ಅವನ ಮರಣ ಹಾಗೂ ನಿವೃತ್ತಿ ಉಪದಾನವನ್ನು, ಅಂತಿಮ ಜ್ಯೇಷ್ಠತಾ ಪಟ್ಟಿಯಲ್ಲಿ ಮತ್ತು ಸಂಬಂಧಪಡುವ ನೇಮಕ ಭರ್ತಿ ನಿಯಮಗಳಲ್ಲಿ ಅವನ ಶ್ರೇಣಿಗೆ ಸಂಬಂಧಿಸಿದಂತೆ ಅಂಥ ಬಡ್ತಿಗೆ ಅವನು ಹಕ್ಕುಳ್ಳವನಾಗಿರುವನೆಂದು ಕಂಡು ಬಂದ ದಿನಾಂಕದಿಂದ ಸೇವೆಯ ಮುಂದಿನ ಉನ್ನತ ವರ್ಗಕ್ಕೆ ಅಥವಾ ದರ್ಜೆಗೆ ಬಡ್ತಿ ಪಡೆದಿದ್ದರೆ ಹೇಗೋ ಹಾಗೆ ಮತ್ತು ಸೇವೆಯ ಸದರಿ ವರ್ಗ ಅಥವಾ ದರ್ಜೆಯಲ್ಲಿ ಸ್ಥಾನಾಪನ್ನತೆಯ ಅವಧಿಯನ್ನು ತೃಪ್ತಿಕರವಾಗಿ ಆತನು ಪೂರೈಸಿರುವನೆಂಬಂತೆ ಪರಿಷ್ಕರಿಸತಕ್ಕದ್ದು ಮತ್ತು ಅಂಥ ನಿವೃತ್ತಿ ವೇತನ ಮತ್ತು ಮರಣ ಹಾಗೂ ನಿವೃತ್ತಿ ಉಪದಾನದ ಪರಿಷ್ಕರಣೆಯಿಂದಾಗಿ ಸಂದಾಯ ಮಾಡಬೇಕಾಗುವ ಹೆಚ್ಚಿನ ಮೊಬಲಗನ್ನು ಸದರಿ ಹಂಚಿಕೆ ಮಾಡಲಾದ ಮೃತ ವ್ಯಕ್ತಿಯ ಉತ್ತರಾಧಿಕಾರಿಗೆ ಸಂದಾಯ ಮಾಡತಕ್ಕದ್ದು.

**8. ಹಂಚಿಕೆ ಮಾಡಲಾದ ಕೆಲವರಿಗೆ ಪ್ರಕರಣಗಳು ಅನ್ವಯಿಸದಿರುವುದು:-** ಅಂತಿಮ ಜ್ಯೇಷ್ಠತಾ ಪಟ್ಟಿಯಲ್ಲಿ ಶ್ರೇಣಿ ನಿರ್ಣಯದ ಆಧಾರದ ಮೇಲಿನ ಬಡ್ತಿಗೆ ಸಂಬಂಧಪಡುವ ಮಟ್ಟಿಗೆ, 4,5,6 ಮತ್ತು 7ನೇ ಪ್ರಕರಣಗಳ ಉಪಬಂಧಗಳು,-

(ಎ) ದಂಡರೂಪವಾಗಿ ಸೇವೆಯಿಂದ ವಜಾಗೊಳಿಸಲಾಗಿರುವ, ತೆಗೆದುಹಾಕಲಾಗಿರುವ ಅಥವಾ ಕಡ್ಡಾಯವಾಗಿ ನಿವೃತ್ತಿಗೊಳಿಸಲಾಗಿರುವ;

(ಬಿ) ದಂಡರೂಪವಾಗಿ ಒಂದು ಕೆಳಗಿನ ಸೇವೆ, ದರ್ಜೆ ಅಥವಾ ಹುದ್ದೆ ಅಥವಾ ಪದಕ್ಕೆ ಇಳಿಸಲಾಗಿರುವ ಅಥವಾ ಬಡ್ತಿಯನ್ನು ತಡೆಹಿಡಿಯಲಾಗಿರುವ;

(ಸಿ) ಸಾರ್ವಜನಿಕ ಹಿತಾಸಕ್ತಿಯಲ್ಲಿ ಸೇವೆಯಿಂದ ನಿವೃತ್ತಿ ಗೊಳಿಸಲಾಗಿರುವ;

(ಡಿ) ಯಾವುದೇ ಹುದ್ದೆ ಅಥವಾ ಪದ ಅಥವಾ ಹುದ್ದೆಗಳ ಅಥವಾ ಪದಗಳ ವರ್ಗಕ್ಕೆ ಬಡ್ತಿ ಹೊಂದಲು ಅನರ್ಹನೆಂದು ಪರಿಗಣಿಸಿರುವ; ಅಥವಾ

(ಇ) ಬಡ್ತಿಯ ತರುವಾಯ, ಉನ್ನತ ಹುದ್ದೆ ಅಥವಾ ಪದ ಅಥವಾ ಹುದ್ದೆಗಳು ಅಥವಾ ಪದಗಳನ್ನು ಹೊಂದಲು ಅನರ್ಹನೆಂಬ ಕಾರಣಗಳ ಮೇಲೆ ಕೆಳಗಿನ ಹುದ್ದೆ ಅಥವಾ ಪದಕ್ಕೆ ಹಿಂದಕ್ಕೆ ಕಳುಹಿಸಲಾಗಿರುವ,

- ಹಂಚಿಕೆ ಮಾಡಲಾದವನಿಗೆ ಅನ್ವಯಿಸತಕ್ಕದ್ದಲ್ಲ.

**9. ಸ್ಥಾನಾಪನ್ನತೆ:-** (1) (2)ನೇ ಉಪ ಪ್ರಕರಣದಲ್ಲಿ ಉಪಬಂಧಿಸಿರುವುದನ್ನುಳಿದು, ಭಾರತ ಸಂವಿಧಾನದ 309ನೇ ಅನುಚ್ಛೇದದ ಪರಂತುಕದ ಅಡಿಯಲ್ಲಿ ಮಾಡಲಾದ ಸ್ಥಾನಾಪನ್ನತೆಗೆ ಸಂಬಂಧಿಸಿದಂಥ ನಿಯಮಗಳು, ಈ ಅಧಿನಿಯಮದ ಅಡಿಯಲ್ಲಿ ಸ್ಥಾನಾಪನ್ನತೆಯ ಉದ್ದೇಶಗಳಿಗೆ ಅನ್ವಯವಾಗತಕ್ಕದ್ದು.

(2) ಒಬ್ಬ ಸಿವಿಲ್ ನೌಕರನು ಮುಂದಿನ ಉನ್ನತ ದರ್ಜೆಗೆ ಬಡ್ತಿ ಹೊಂದಲು ಹಕ್ಕುಳ್ಳವನಾದಂಥ ದಿನಾಂಕ ಅಥವಾ ದಿನಾಂಕಗಳಂದು ಅವನ ಸೇವಾ ದಾಖಲೆಯು ತೃಪ್ತಿಕರವಾಗಿದ್ದರೆ ಮತ್ತು ಸೂಕ್ತ ಕಾಲದಲ್ಲಿ ಅಂಥ ಬಡ್ತಿಗೆ ಅನ್ವಯಿಸುವ ನೇಮಕ ಭರ್ತಿ ನಿಯಮಗಳಲ್ಲಿ ನಿಯಮಿಸಲಾದ ಅರ್ಹತೆಗಳನ್ನು ಅವನು ಹೊಂದಿದ್ದರೆ, ಅವನು ಬಡ್ತಿ ಹೊಂದಿದ ಹುದ್ದೆ ಅಥವಾ ಪದದಲ್ಲಿ ಸ್ಥಾನಾಪನ್ನ ಅವಧಿಯನ್ನು ತೃಪ್ತಿಕರವಾಗಿ ಪೂರೈಸಿರುವುದಾಗಿ ಭಾವಿಸತಕ್ಕದ್ದು ಮತ್ತು ಅಂತಿಮ ಜ್ಯೇಷ್ಠತಾ ಪಟ್ಟಿಯೂ ಸೇರಿದಂತೆ, ಜ್ಯೇಷ್ಠತಾ ಪಟ್ಟಿಯಲ್ಲಿರುವ ಅವನ ಜ್ಯೇಷ್ಠತೆಯ ಆಧಾರದ ಮೇಲೆ ಬಡ್ತಿಗಾಗಿ ಅವನು ಹಕ್ಕುಳ್ಳವನೆಂದು ಕಂಡುಬಂದಂಥ ಸೇವೆಯ ಒಂದು ಅಥವಾ ಹೆಚ್ಚಿನ ಉನ್ನತ ವರ್ಗಗಳಿಗೆ ಅಥವಾ ದರ್ಜೆಗಳಿಗೆ ಬಡ್ತಿ ನೀಡಬಹುದು.

[1][**9ಎ. ನಿಯಮಗಳು:-** (1) ರಾಜ್ಯ ಸರ್ಕಾರವು, ಈ ಅಧಿನಿಯಮದ ಉದ್ದೇಶಗಳನ್ನು ನೆರವೇರಿಸಲು ನಿಯಮಗಳನ್ನು ರಚಿಸಬಹುದು.

(2) ಈ ಅಧಿನಿಯಮದ ಅಡಿಯಲ್ಲಿ ರಚಿಸಲಾದ ಪ್ರತಿಯೊಂದು ನಿಯಮವನ್ನು, ಅದನ್ನು ರಚಿಸಿದ ತರುವಾಯ, ಆದಷ್ಟು ಬೇಗನೆ, ರಾಜ್ಯ ವಿಧಾನ ಮಂಡಲದ ಪ್ರತಿಯೊಂದು ಸದನದ ಮುಂದೆ ಅದು ಅಧಿವೇಶನದಲ್ಲಿರುವಾಗ ಒಂದು ಅಧಿವೇಶನದಲ್ಲಿ ಅಥವಾ ಒಂದಾದ ಮೇಲೊಂದರಂತೆ ಬರುವ ಎರಡು ಅಥವಾ ಹೆಚ್ಚಿನ ಅಧಿವೇಶನಗಳಲ್ಲಿ ಅಡಕವಾಗಬಹುದಾದ ಒಟ್ಟು ಮೂವತ್ತು ದಿನಗಳ ಅವಧಿಯವರೆಗೆ ಇಡತಕ್ಕದ್ದು ಮತ್ತು ಮೇಲೆ ಹೇಳಲಾದ ಅಧಿವೇಶನ ಅಥವಾ ಅದಕ್ಕೆ ನಿಕಟೋತ್ತರ ಅಧಿವೇಶನದ ಮುಕ್ತಾಯಕ್ಕೆ ಮುಂಚೆ ಆ ನಿಯಮದಲ್ಲಿ ಯಾವುದೇ ಮಾರ್ಪಾಟನ್ನು ಮಾಡಬೇಕೆಂದು ಎರಡೂ ಸದನಗಳು ಒಪ್ಪಿದರೆ, ಅಥವಾ ಆ ನಿಯಮವನ್ನು ರಚಿಸಬಾರದೆಂದು ಎರಡೂ ಸದನಗಳು ಒಪ್ಪಿದರೆ, ಆ ಮಾರ್ಪಾಟು ಅಥವಾ ರದ್ದಿಯಾತಿಯು ರಾಜ್ಯಪತ್ರದಲ್ಲಿ ಸರ್ಕಾರದಿಂದ ಅಧಿಸೂಚಿತವಾದ ದಿನಾಂಕದಿಂದ ಆ ನಿಯಮವು, ಅಂಥ ಮಾರ್ಪಾಟಾದ ರೀತಿಯಲ್ಲಿ ಮಾತ್ರ ಪರಿಣಾಮಕಾರಿಯಾಗತಕ್ಕದ್ದು ಅಥವಾ ಸಂದರ್ಭಾನುಸಾರ, ಪರಿಣಾಮಕಾರಿಯಾಗತಕ್ಕದ್ದಲ್ಲ; ಅದಾಗ್ಯೂ, ಅಂಥ ಯಾವುದೇ ಮಾರ್ಪಾಟು ಅಥವಾ ರದ್ದಿಯಾತಿಯು ಆ ನಿಯಮದ ಅಡಿಯಲ್ಲಿ ಈ ಹಿಂದೆ ಮಾಡಿದ ಯಾವುದೇ ಕೃತ್ಯದ ಮಾನ್ಯತೆಗೆ ಪ್ರತಿಕೂಲವಾಗಿರತಕ್ಕದ್ದಲ್ಲ.][1]

1. 1976ರ ಅಧಿನಿಯಮ 40 ಮತ್ತು 1982ರ ಅಧಿನಿಯಮ 25 ರ ಮೂಲಕ 11.04.1974 ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.

**10. ತೊಂದರೆಗಳ ನಿವಾರಣೆ:-** ಯಾವುದೇ ಪ್ರಕರಣಕ್ಕೆ ಸಂಬಂಧಿಸಿದಂತೆ ಈ ಅಧಿನಿಯಮವನ್ನು ಅನ್ವಯಿಸುವಲ್ಲಿ ಯಾವುದೇ ತೊಂದರೆಗಳು ಉದ್ಭವಿಸಿದರೆ, ರಾಜ್ಯ ಸರ್ಕಾರವು ತೊಂದರೆಯನ್ನು ನಿವಾರಿಸುವ ಉದ್ದೇಶಕ್ಕಾಗಿ ಅಗತ್ಯವಾಗಬಹುದಾದಂಥ ಆದೇಶಗಳನ್ನು ರಚಿಸಬಹುದು.

**11. ಅಧ್ಯಾರೋಹಿ ಪರಿಣಾಮ:-**(1) ಈ ಅಧಿನಿಯಮದ ಅಥವಾ ಅದರ ಅಡಿಯಲ್ಲಿ ಮಾಡಲಾದ ಯಾವುದೇ ಆದೇಶದ ಉಪಬಂಧಗಳು ತತ್ಕಾಲದಲ್ಲಿ ಜಾರಿಯಲ್ಲಿರುವ ಯಾವುದೇ ಕಾನೂನು ಅಥವಾ ಕಾನೂನಿನ ಬಲವನ್ನು ಹೊಂದಿರುವ ಯಾವುದೇ ಆದೇಶದಲ್ಲಿ ಅಥವಾ ಭಾರತ ಸಂವಿಧಾನದ 309ನೇ ಅನುಚ್ಛೇದದ ಪರಂತುಕದ ಅಡಿಯಲ್ಲಿ ರಚಿಸಲಾದ ನಿಯಮಗಳಲ್ಲಿ ಅಥವಾ ಯಾರೇ ಹಂಚಿಕೆ ಮಾಡಲಾದವನ ಸೇವೆಯ ಷರತ್ತುಗಳನ್ನು ವಿನಿಯಮಿಸುವ ಯಾವುದೇ ಉಪಬಂಧದಲ್ಲಿ ಅಥವಾ ಅಂಥ ಯಾವುದೇ ಕಾನೂನು, ನಿಯಮಗಳು ಅಥವಾ ಉಪಬಂಧಗಳ ಬಲದಿಂದ ಮಾಡಲಾದ ಯಾವುದೇ ಆದೇಶದಲ್ಲಿ ಅವುಗಳಿಗೆ ಅಸಂಗತವಾದುದು ಏನೇ ಒಳಗೊಂಡಿದ್ದರೂ ಪರಿಣಾಮಕಾರಿಯಾಗಿರತಕ್ಕದ್ದು.

(2) ಯಾವುದೇ ನ್ಯಾಯಾಲಯದ ಅಥವಾ ಇತರ ಸಕ್ಷಮ ಪ್ರಾಧಿಕಾರದ ಯಾವುದೇ ತೀರ್ಪು, ಡಿಕ್ರಿ, ಅಥವಾ ಆದೇಶದಲ್ಲಿ ಏನೇ ಒಳಗೊಂಡಿದ್ದರೂ, ಈ ಅಧಿನಿಯಮದ ಉಪಬಂಧಗಳು ಅನ್ವಯಿಸುವ ಒಬ್ಬ ಸಿವಿಲ್ ನೌಕರನು ಹಕ್ಕುಳ್ಳವನಾಗಿರುವ ಹಕ್ಕುಗಳನ್ನು, ಈ ಅಧಿನಿಯಮದ ಉಪಬಂಧಗಳಿಗನುಸಾರವಾಗಿ ತೀರ್ಮಾನಿಸತಕ್ಕದ್ದು ಮತ್ತು ತದನುಸಾರವಾಗಿ ಸಿವಿಲ್ ನೌಕರರ ಬಡ್ತಿಯನ್ನು ನಿರ್ದೇಶಿಸುವ ಅಥವಾ ಬಡ್ತಿಗಾಗಿ ಮತ್ತು ಅಂಥ ಬಡ್ತಿಯ ಪರಿಣಾಮವಾಗಿ ಉಂಟಾಗುವ ಸಂಬಳ ಮತ್ತು ಭತ್ಯೆಗಳ ಸಂದಾಯಕ್ಕಾಗಿ ಪರಿಗಣಿಸುವಂಥ ಯಾವುದೇ ತೀರ್ಪು, ಡಿಕ್ರಿ ಅಥವಾ ಆದೇಶವನ್ನು ಪರಿಷ್ಕರಿಸತಕ್ಕದ್ದು ಮತ್ತು ಈ ಅಧಿನಿಯಮದ ಉಪಬಂಧಗಳಿಗನುಸಾರವಾಗಿ ಆದೇಶಗಳನ್ನು ಮಾಡತಕ್ಕದ್ದು.

**12. ನಿರಸನ:-** [1][ಕರ್ನಾಟಕ][1] ರಾಜ್ಯ ಸಿವಿಲ್ ಸೇವಾ (ಹಂಚಿಕೆ ಮಾಡಲಾದವರು) (ವಿಶೇಷ) ನಿಯಮಗಳು, 1971ನ್ನು ಈ ಮೂಲಕ ನಿರಸನಗೊಳಿಸಲಾಗಿದೆ.

1. 1976ರ ಅಧಿನಿಯಮ 40 ಮತ್ತು 1982ರ ಅಧಿನಿಯಮ 25ರ ಮೂಲಕ 11.04.1974ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.

**13. ಉಳಿಸುವಿಕೆಗಳು:-** 11ನೇ ಪ್ರಕರಣದಲ್ಲಿ ಉಪಬಂಧಿಸಿರುವುದನ್ನುಳಿದು, ಈ ಅಧಿನಿಯಮದಲ್ಲಿ ಇರುವುದು ಯಾವುದೂ [1][ಕರ್ನಾಟಕ][1] ರಾಜ್ಯದ ವ್ಯವಹಾರಗಳಿಗೆ ಸಂಬಂಧಿಸಿದಂತೆ ಸೇವೆ ಸಲ್ಲಿಸುತ್ತಿರುವ ವ್ಯಕ್ತಿಗಳ ಸೇವಾ ಷರತ್ತುಗಳನ್ನು ನಿರ್ಧರಿಸುವ ಸಂಬಂಧದಲ್ಲಿ ಭಾರತ ಸಂವಿಧಾನದ ಉಪಬಂಧಗಳ ಪ್ರವರ್ತನೆಯನ್ನು ಬಾಧಿಸುತ್ತದೆಂದು ಭಾವಿಸತಕ್ಕದ್ದಲ್ಲ.

1. 1976ರ ಅಧಿನಿಯಮ 40 ಮತ್ತು 1982ರ ಅಧಿನಿಯಮ 25ರ ಮೂಲಕ 11.04.1974ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.

# ಕರ್ನಾಟಕ ರಾಜ್ಯ ಸಿವಿಲ್ ಸೇವಾ (ಬಡ್ತಿ, ವೇತನ ಮತ್ತು ನಿವೃತ್ತಿ ವೇತನದ ವಿನಿಯಮನ) ನಿಯಮಗಳು, 1978

**ನಿಯಮಗಳ ಅನುಕ್ರಮಣಿಕೆ**

**ನಿಯಮಗಳು**

# ಕರ್ನಾಟಕ ರಾಜ್ಯ ಸಿವಿಲ್ ಸೇವಾ (ಬಡ್ತಿ, ವೇತನ ಮತ್ತು ನಿವೃತ್ತಿ ವೇತನದ ವಿನಿಯಮನ) ನಿಯಮಗಳು, 1978

**(1978ರ ಜೂನ್ ಹದಿನೈದನೇ ದಿನಾಂಕದಂದು ಕರ್ನಾಟಕ ರಾಜ್ಯಪತ್ರದಲ್ಲಿ ಮೊದಲು ಪ್ರಕಟವಾಗಿದೆ)**

**ಅಧಿಸೂಚನೆ ಸಂಖ್ಯೆ ಸಿಆಸುಇ 9 ಐಎಫ್‌ಪಿ 76, ಬೆಂಗಳೂರು, ದಿನಾಂಕ 5ನೇ ಜೂನ್, 1978**

ಕರ್ನಾಟಕ ರಾಜ್ಯ ಸಿವಿಲ್ ಸೇವಾ (ಬಡ್ತಿ, ವೇತನ ಮತ್ತು ನಿವೃತ್ತಿ ವೇತನದ ವಿನಿಯಮನ) ಅಧಿನಿಯಮ, 1973ರ (1974ರ ಕರ್ನಾಟಕ ಅಧಿನಿಯಮ 11) 3ನೇ ಪ್ರಕರಣದ (1)ನೇ ಉಪಪ್ರಕರಣದ (ಎ) ಖಂಡದೊಂದಿಗೆ ಓದಲಾದ 9 ಎ ಪ್ರಕರಣದಿಂದ ಪ್ರದತ್ತವಾದ ಅಧಿಕಾರಗಳನ್ನು ಚಲಾಯಿಸಿ, ಕರ್ನಾಟಕ ಸರ್ಕಾರವು ಈ ಮುಂದಿನ ನಿಯಮಗಳನ್ನು ರಚಿಸಿದೆ, ಎಂದರೆ:-

**1. ಸಂಕ್ಷಿಪ್ತ ಹೆಸರು ಮತ್ತು ಪ್ರಾರಂಭ:-** (1) ಈ ನಿಯಮಗಳನ್ನು ಕರ್ನಾಟಕ ರಾಜ್ಯ ಸಿವಿಲ್ ಸೇವಾ (ಬಡ್ತಿ, ವೇತನ ಮತ್ತು ನಿವೃತ್ತಿವೇತನದ ವಿನಿಯಮನ) ನಿಯಮಗಳು, 1978 ಎಂದು ಕರೆಯತಕ್ಕದ್ದು.

(2) ಈ ನಿಯಮಗಳು ಅವುಗಳನ್ನು ಸರ್ಕಾರಿ ರಾಜ್ಯಪತ್ರದಲ್ಲಿ ಪ್ರಕಟಿಸಿದ ದಿನಾಂಕದಿಂದ ಜಾರಿಗೆ ಬರತಕ್ಕದ್ದು.

**2. ಬಡ್ತಿ:-** ಒಬ್ಬ ಸರ್ಕಾರಿ ನೌಕರನ ಸಂಬಂಧದಲ್ಲಿ ಈ ಮುಂದಿನ ಸಂದರ್ಭಗಳಲ್ಲಿ ಅಂದರೆ,-

(1) ಬಡ್ತಿಗೆ ಸಂಬಂಧಿಸಿದ ಆತನ ಕ್ಲೇಮನ್ನು,-

[1][(ಎ) ಆತನ ವಿರುದ್ಧ ಬಾಕಿ ಇದ್ದ ಶಿಸ್ತು ವ್ಯವಹರಣೆಗಳ ಅಥವಾ ಕ್ರಿಮಿನಲ್ ಅಭಿಯೋಜನೆಯ ಅಥವಾ ಇವೆರಡರ ಕಾರಣದಿಂದ ತಡೆಹಿಡಿಯಲಾಗಿದ್ದು ಮತ್ತು ತರುವಾಯ ಆತನನ್ನು ದೋಷಮುಕ್ತಗೊಳಿಸಿದ್ದರೆ ಅಥವಾ ನಿರ್ದೋಷಿಯೆಂದು ಖುಲಾಸೆ ಮಾಡಿದ್ದರೆ; ಅಥವಾ][1]

1. ಅಧಿಸೂಚನೆ ಸಂಖ್ಯೆ ಸಿಆಸುಇ 4 ಐಎಫ್‌ಪಿ80 ದಿನಾಂಕ 27.5.1981ರ ಮೂಲಕ (15.6.1978ರಿಂದ ಜಾರಿಗೆ ಬರುವಂತೆ) ಪ್ರತಿಯೋಜಿಸಲಾಗಿದೆ. ಜಿಎಸ್‌ಆರ್ 137 ಕರ್ನಾಟಕ ರಾಜ್ಯಪತ್ರ ದಿನಾಂಕ 4.6.1981.

(ಬಿ) ಆತ ಬೇರೊಂದು ಇಲಾಖೆಯಲ್ಲಿ ಪ್ರತಿನಿಯೋಜನೆಯ ಮೇಲೆ ಕೆಲಸ ಮಾಡುತ್ತಿದ್ದನೆಂಬ ಕಾರಣದಿಂದ ಅಥವಾ ಅನ್ಯಥಾ ಪರಿಗಣಿಸಿರದಿದ್ದರೆ; ಅಥವಾ

(ಸಿ) ಆತನನ್ನು ಅಂತರರಾಜ್ಯ ತಾತ್ಕಾಲಿಕ ಅಥವಾ ಅಂತಿಮ ಜ್ಯೇಷ್ಠತಾ ಪಟ್ಟಿಯಲ್ಲಿ ಅಥವಾ ಶ್ರೇಣಿ ಪಟ್ಟಿಯಲ್ಲಿ ತಪ್ಪಾಗಿ ಅಥವಾ ದೋಷಯುಕ್ತವಾಗಿ ಸೂಚಿಸಲಾಗಿದೆ ಎಂಬ ಕಾರಣದಿಂದ ಪರಿಗಣಿಸಿರದಿದ್ದರೆ; [1][ಅಥವಾ][1]

1. ಅಧಿಸೂಚನೆ ಸಂಖ್ಯೆ ಸಿಆಸುಇ 2 ಐಎಫ್‌ಪಿ 83 ದಿನಾಂಕ 24.10.1983ರ ಮೂಲಕ (ದಿನಾಂಕ 8.11.1984 ರಿಂದ ಜಾರಿಗೆ ಬರುವಂತೆ) ಸೇರಿಸಲಾಗಿದೆ. ಜಿಎಸ್‌ಆರ್ 256, ಪುಟ 327 ಕರ್ನಾಟಕ ರಾಜ್ಯ ಪತ್ರ ದಿನಾಂಕ 8.11.1984.

[1][(ಡಿ) ಆತನ ರಹಸ್ಯ ವರದಿಗಳಲ್ಲಿ ದಾಖಲಾಗಿದ್ದ ಪ್ರತಿಕೂಲ ಷರಾಗಳ ಕಾರಣದಿಂದ ಗಣನೆಗೆ ತೆಗೆದುಕೊಂಡಿರದಿದ್ದರೆ ಹಾಗೂ ತರುವಾಯ ಆ ಷರಾಗಳನ್ನು ತೆಗೆದುಹಾಕಿದ್ದರೆ][1];

1. ಅಧಿಸೂಚನೆ ಸಂಖ್ಯೆ ಸಿಆಸುಇ 2 ಐಎಫ್‌ಪಿ 83 ದಿನಾಂಕ 24.10.1983ರ ಮೂಲಕ (ದಿನಾಂಕ 8.11.1984 ರಿಂದ ಜಾರಿಗೆ ಬರುವಂತೆ) ಸೇರಿಸಲಾಗಿದೆ. ಜಿಎಸ್‌ಆರ್ 256, ಪುಟ 327 ಕರ್ನಾಟಕ ರಾಜ್ಯ ಪತ್ರ ದಿನಾಂಕ 8.11.1984.

(2) ಶ್ರೇಣಿ ಪಟ್ಟಿ ಅಥವಾ ತಾತ್ಕಾಲಿಕ ಅಂತರರಾಜ್ಯ ಜ್ಯೇಷ್ಠತಾಪಟ್ಟಿ ಅಥವಾ ಅಂತಿಮವಾದುದಲ್ಲದ ಯಾವುದೇ ಇತರ ಅಂತರರಾಜ್ಯ ಜೇಷ್ಠತಾ ಪಟ್ಟಿಯನ್ನು ಪ್ರವರ್ತನೆಗೊಳಿಸುವಾಗ ಸಮರ್ಥನೀಯವಲ್ಲದ ಕಾರಣದಿಂದ [1][XXX][1] ಬಡ್ತಿ ನೀಡುವುದಕ್ಕೆ ಆತನನ್ನು ಪರಿಗಣಿಸಿರದಿದ್ದರೆ; ಅಥವಾ

1. ಅಧಿಸೂಚನೆ ಸಂಖ್ಯೆ ಸಿಆಸುಇ 4 ಐಎಫ್‌ಪಿ 80 ದಿನಾಂಕ 27.5.1981 ರ ಮೂಲಕ (15.6.1978ರಿಂದ ಜಾರಿಗೆ ಬರುವಂತೆ) ಬಿಟ್ಟುಬಿಡಲಾಗಿದೆ. ಜಿಎಸ್‌ಆರ್ 137 ಕರ್ನಾಟಕ ರಾಜ್ಯಪತ್ರ ದಿನಾಂಕ 4.6.1981.

(3) ಚಾಲ್ತಿಯಲ್ಲಿದ್ದ ಪಟ್ಟಿಯಲ್ಲಿನ ಆತನ ಜ್ಯೇಷ್ಠತೆಗನುಸಾರವಾಗಿ ಅರ್ಹತೆ ಹೊಂದಿದ್ದರೆ ಮತ್ತು ವೃಂದ ಮತ್ತು ನೇಮಕಾತಿ ನಿಯಮಗಳಿಗನುಸಾರ ಬಡ್ತಿಗೆ ಅನ್ಯಥಾ ಅರ್ಹನಾಗಿದ್ದರೆ -ಸಕ್ಷಮ ಪ್ರಾಧಿಕಾರಿಯು ಅವನನ್ನು ಹುದ್ದೆಯ ಸ್ವತಂತ್ರ ಪ್ರಭಾರದಲ್ಲಿ ಮಾತ್ರ ಇರಿಸಿದ್ದರೆ ಮತ್ತು ಆತನು ಸದರಿ ಹುದ್ದೆಯ ಕರ್ತವ್ಯಗಳನ್ನು ನಿರ್ವಹಿಸಿದ್ದರೆ ಒಂದು ಪೂರ್ವಾನ್ವಯ ದಿನಾಂಕದಿಂದ ಪರಿಣಾಮಕಾರಿಯಾಗುವಂತೆ ಬಡ್ತಿ ನೀಡಬಹುದು.

[1][ಪರಂತು, ಬೇರೊಂದು ಇಲಾಖೆಗೆ ಪ್ರತಿನಿಯೋಜನೆಯ ಮೇಲೆ ಹೋಗಿರುವ ಮತ್ತು ಮಾತ್ರ ಇಲಾಖೆಯಲ್ಲಿ ಒಂದು ಹುದ್ದೆಯ ಸ್ವತಂತ್ರ ಪ್ರಭಾರದಲ್ಲಿಟ್ಟಿರುವ ಒಬ್ಬ ಸರ್ಕಾರಿ ನೌಕರನನ್ನು, ಪ್ರತಿನಿಯೋಜನೆಯ ಮೇಲಿನ ಆತನ ಸೇವೆಯು ಸಾರ್ವಜನಿಕ ಹಿತದೃಷ್ಟಿಯಿಂದ ಅಗತ್ಯವಾಗಿರುತ್ತದೆಂಬ ಕಾರಣದಿಂದ ಹುದ್ದೆಯ ಕರ್ತವ್ಯಗಳನ್ನು ನಿರ್ವಹಿಸದಂತೆ ತಡೆದಿದ್ದರೆ, ಆತನನ್ನೂ ಸಹ, ಆತನಿಗಿಂತ ಜ್ಯೇಷ್ಠತೆಯಲ್ಲಿ ಕಿರಿಯನಾಗಿರುವವನನ್ನು ಪರಿಗಣಿಸುವ ದಿನಾಂಕದಿಂದ ಬಡ್ತಿ ನೀಡುವುದಕ್ಕಾಗಿ ಈ ಉಪನಿಯಮದ ಅಡಿಯಲ್ಲಿ ಪರಿಗಣಿಸತಕ್ಕದ್ದು.][1]

1. ಅಧಿಸೂಚನೆ ಸಂಖ್ಯೆ ಸಿಆಸುಇ 2 ಐಎಫ್‌ಪಿ 96, ದಿನಾಂಕ 20.3.1997ರ ಮೂಲಕ (ದಿನಾಂಕ 22.3.1997 ರಿಂದ ಜಾರಿಗೆ ಬರುವಂತೆ) ಸೇರಿಸಲಾಗಿದೆ.

The above translation of the Karnataka State Civil Service (Regulation of Promotion, Pay and Pension) Act, 1973 (Karnataka Act 11 of 1974) and the Karnataka State Civil Service (Regulation of Promotion, Pay and Pension) Rules, 1978 shall be authoritative text in Kannada Language under section 5A of the Karnataka Official Language Act, 1963 (Karnataka Act 26 of 1963).

GOVERNOR OF KARNATAKA

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಜಿ.ಕೆ. ಬೋರೇಗೌಡ**

ಪಿ.ಆರ್. 1289

ಸರ್ಕಾರದ ಕಾರ್ಯದರ್ಶಿ,

ಸಂಸದೀಯ ವ್ಯವಹಾರಗಳು ಮತ್ತು ಶಾಸನ ರಚನೆ ಇಲಾಖೆ

## ಅಧಿಸೂಚನೆ

**ಸಂಖ್ಯೆ: ಸಂವ್ಯಶಾಇ 62 ರಾಶಾಪ್ರ 2006, ಬೆಂಗಳೂರು, ದಿನಾಂಕ: 29ನೇ ಜುಲೈ 2006**

ಕರ್ನಾಟಕ ಸೇಂದಿ ಕೆಲಸಗಾರರ ಕಲ್ಯಾಣ ನಿಧಿ ಅಧಿನಿಯಮ, 1981ರ (1984ರ 31) ಅಧಿಕೃತ ಕನ್ನಡ ಭಾಷಾಂತರವನ್ನು ಕರ್ನಾಟಕ ಅಫಿಷಿಯಲ್ ಲಾಂಗ್ವಾಜ್ ಆಕ್ಟ್, 1963ರ ಪ್ರಕರಣ 5A ಅಡಿಯಲ್ಲಿ ರಾಜ್ಯಪಾಲರ ಅಧಿಕಾರದ ಮೇರೆಗೆ ಸಾರ್ವಜನಿಕರ ಮಾಹಿತಿಗಾಗಿ ರಾಜ್ಯ ಪತ್ರದಲ್ಲಿ ಮರು ಪ್ರಕಟಿಸಲು ಆದೇಶಿಸಲಾಗಿದೆ.

## ಉದ್ದೇಶಗಳು ಮತ್ತು ಕಾರಣಗಳ ಹೇಳಿಕೆ

**1948 ರ ಅಧಿನಿಯಮ 31.–** ಕರ್ನಾಟಕದಲ್ಲಿ ಸೇಂದಿ ಕೆಲಸಗಾರರು ಸಮಾಜದ ಅತ್ಯಂತ ಬಡ ವರ್ಗಗಳಿಗೆ ಸೇರಿದವರಾಗಿದ್ದಾರೆ ಮತ್ತು ಸಂಪೂರ್ಣವಾಗಿ ಅಸಂಘಟಿತರಾಗಿದ್ದಾರೆ. ಅವರಿಗೆ ಮತ್ತು ಅವರ ಅವಲಂಬಿತರಿಗೆ ಭದ್ರತೆ ಒದಗಿಸುವ ಕ್ರಮವನ್ನು ಕಲ್ಪಿಸುವುದು ಅಗತ್ಯವೆಂದು ಬಹಳ ಹಿಂದಿನಿಂದಲೂ ಭಾವಿಸಲಾಗಿದೆ.

ಆದ್ದರಿಂದ, ನಿಯೋಜಕರಿಂದ ಹಾಗೂ ನೌಕರರಿಂದ ವಂತಿಗೆ ಸಂಗ್ರಹಿಸುವ ಮೂಲಕ ಕಲ್ಯಾಣ ನಿಧಿಯೊಂದನ್ನು ಸ್ಥಾಪಿಸಲು ಮತ್ತು ಸದರಿ ನಿಧಿಯ ಆಡಳಿತ ನಡೆಸಲು, ಕೆಲಸಗಾರರ ಕಲ್ಯಾಣಕ್ಕಾಗಿ ಯೋಜನೆಗಳನ್ನು ತಯಾರಿಸಲು ಮತ್ತು ಇತರ ಪ್ರಾಸಂಗಿಕ ವಿಷಯಗಳಿಗಾಗಿ ಸ್ವಾಯತ್ತ ಮಂಡಲಿಯನ್ನು ರಚಿಸಲು ಉದ್ದೇಶಿಸಲಾಗಿದೆ.

ಆದ್ದರಿಂದ ಈ ವಿಧೇಯಕ.

(ಕರ್ನಾಟಕ ರಾಜ್ಯ ಪತ್ರ (ವಿಶೇಷ ಸಂಚಿಕೆ) ಭಾಗ -IV 2 ಎ, ಸಂಖ್ಯೆ 491 ದಿನಾಂಕ 27.6.1981ರಲ್ಲಿ ಪುಟ 14 ರಲ್ಲಿ ಪ್ರಕಟವಾಗಿದೆ.)

## ಕರ್ನಾಟಕ ಸೇಂದಿ ಕೆಲಸಗಾರರ ಕಲ್ಯಾಣ ನಿಧಿ ಅಧಿನಿಯಮ, 1981

## ಪ್ರಕರಣಗಳ ಅನುಕ್ರಮಣಿಕೆ

**ಪ್ರಕರಣಗಳು:–**

## 1984ರ ಕರ್ನಾಟಕ ಅಧಿನಿಯಮ 31

*(1984ರ ಜೂನ್ ಎಂಟನೇ ದಿನಾಂಕದಂದು ಕರ್ನಾಟಕ ರಾಜ್ಯಪತ್ರದ ವಿಶೇಷ ಸಂಚಿಕೆಯಲ್ಲಿ ಮೊದಲು ಪ್ರಕಟವಾಗಿದೆ)*

# ಕರ್ನಾಟಕ ಸೇಂದಿ ಕೆಲಸಗಾರರ ಕಲ್ಯಾಣ ನಿಧಿ ಅಧಿನಿಯಮ , 1981

*(1984ರ ಏಪ್ರಿಲ್ ಇಪ್ಪತ್ತೆಂಟನೇ ದಿನಾಂಕದಂದು ರಾಷ್ಟ್ರಪತಿಯವರ ಅನುಮೋದನೆ ಪಡೆದಿದೆ)*

ಕರ್ನಾಟಕ ರಾಜ್ಯದಲ್ಲಿರುವ ಸೇಂದಿ ಕೆಲಸಗಾರರ ಕಲ್ಯಾಣ ವೃದ್ಧಿಗೆ ನಿಧಿಯೊಂದನ್ನು ರಚಿಸುವುದಕ್ಕಾಗಿ ಉಪಬಂಧ ಕಲ್ಪಿಸುವ ಒಂದು ಅಧಿನಿಯಮ.

ಕರ್ನಾಟಕ ರಾಜ್ಯದಲ್ಲಿರುವ ಸೇಂದಿ ಕೆಲಸಗಾರರ ಕಲ್ಯಾಣ ವೃದ್ಧಿಗೆ ನಿಧಿಯೊಂದನ್ನು ರಚಿಸುವುದಕ್ಕಾಗಿ ಉಪಬಂಧ ಕಲ್ಪಿಸುವುದು ಯುಕ್ತವಾಗಿರುವುದರಿಂದ;

ಭಾರತ ಗಣರಾಜ್ಯದ ಮೂವತ್ತೆರಡನೇ ವರ್ಷದಲ್ಲಿ ಕರ್ನಾಟಕ ರಾಜ್ಯ ವಿಧಾನ ಮಂಡಲದಿಂದ ಈ ಮುಂದಿನಂತೆ ಅಧಿನಿಯಮಿತವಾಗತಕ್ಕದ್ದು:

**1. ಚಿಕ್ಕ ಹೆಸರು ಮತ್ತು ಪ್ರಾರಂಭ.-** (1) ಈ ಅಧಿನಿಯಮವನ್ನು ಕರ್ನಾಟಕ ಸೇಂದಿ ಕೆಲಸಗಾರರ ಕಲ್ಯಾಣ ನಿಧಿ ಅಧಿನಿಯಮ, 1981 ಎಂದು ಕರೆಯತಕ್ಕದ್ದು.

(2) ಇದು, ರಾಜ್ಯ ಸರ್ಕಾರವು, ಸರ್ಕಾರಿ ರಾಜ್ಯ ಪತ್ರದಲ್ಲಿ ಅಧಿಸೂಚನೆಯ ಮೂಲಕ ಗೊತ್ತುಪಡಿಸಬಹುದಾದಂಥ [1][ದಿನಾಂಕ][1] ದಂದು ಜಾರಿಗೆ ಬರತಕ್ಕದ್ದು.

1. ಈ ಅಧಿನಿಯಮವು ಅಧಿಸೂಚನೆಯ ಮೂಲಕ 2.10.1984ರಂದು ಜಾರಿಗೆ ಬಂದಿದೆ. ಅಧಿಸೂಚನೆಯ ಪಾಠವು ಕೊನೆಯ ಪುಟದಲ್ಲಿದೆ.

**2. ಪರಿಭಾಷೆಗಳು.-** ಈ ಅಧಿನಿಯಮದಲ್ಲಿ, ಸಂದರ್ಭವು ಅನ್ಯಥಾ ಅಗತ್ಯಪಡಿಸಿದ ಹೊರತು,-

(ಎ) "ಮಂಡಳಿ" ಎಂದರೆ, 5ನೇ ಪ್ರಕರಣದ ಅಡಿಯಲ್ಲಿ ರಚಿಸಲಾದ ಕರ್ನಾಟಕ ಸೇಂದಿ ಕೆಲಸಗಾರರ ಕಲ್ಯಾಣ ನಿಧಿ ಮಂಡಲಿ;

(ಬಿ) ಒಬ್ಬ ಸದಸ್ಯನಿಗೆ ಸಂಬಂಧಪಟ್ಟಂತೆ " ವಂತಿಗೆ " ಎಂದರೆ, ಈ ಯೋಜನೆಯ ಅಡಿಯಲ್ಲಿ ಸಂದಾಯವಾಗಬೇಕಾದ ಒಂದು ವಂತಿಗೆ;

(ಸಿ) "ನಿಯೋಜಕ" ಎಂದರೆ, ನೇರವಾಗಿಯಾಗಲಿ ಅಥವಾ ಬೇರೊಬ್ಬ ವ್ಯಕ್ತಿಯ ಮೂಲಕವಾಗಲಿ, ಅಥವಾ ತನ್ನ ಪರವಾಗಿಯಾಗಲಿ ಅಥವಾ ಯಾರೇ ಇತರ ವ್ಯಕ್ತಿಯ ಪರವಾಗಿಯಾಗಲಿ ಒಬ್ಬ ಅಥವಾ ಹೆಚ್ಚು ನೌಕರರನ್ನು ನಿಯೋಜಿಸಿಕೊಂಡಿರುವ ಯಾರೇ ವ್ಯಕ್ತಿ ಮತ್ತು ಇದರಲ್ಲಿ ಕರ್ನಾಟಕ ಅಬಕಾರಿ ಅಧಿನಿಯಮ, 1965 (1966ರ ಕರ್ನಾಟಕ ಅಧಿನಿಯಮ 21)ರ ಅಡಿಯಲ್ಲಿ ಸೇಂದಿಯ ತಯಾರಿಕೆ, ಹಂಚಿಕೆ, ಸಾಗಣೆ, ದಾಸ್ತಾನು ಅಥವಾ ಮಾರಾಟಕ್ಕಾಗಿ ಲೈಸೆನ್ಸ್ ಹೊಂದಿರುವ ಯಾರೇ ವ್ಯಕ್ತಿಯು ಸೇರುತ್ತಾನೆ;

(ಡಿ) "ನೌಕರ" ಎಂದರೆ, ಸೇಂದಿಯ ತಯಾರಿಕೆ, ಹಂಚಿಕೆ, ಸಾಗಣೆ, ದಾಸ್ತಾನು, ಅಥವಾ ಮಾರಾಟದ ಸಂಬಂಧದಲ್ಲಿ ಮಜೂರಿಗಾಗಿ ನಿಯೋಜಿತನಾಗಿರುವ ಮತ್ತು ನಿಯೋಜಕನಿಂದ ನೇರವಾಗಿ ಅಥವಾ ಪರೋಕ್ಷವಾಗಿ ತನ್ನ ಮಜೂರಿಗಳನ್ನು ಪಡೆಯುವ ಯಾರೇ ವ್ಯಕ್ತಿ ಮತ್ತು ಇದರಲ್ಲಿ ಸೇಂದಿಯ ತಯಾರಿಕೆ, ಹಂಚಿಕೆ, ಸಾಗಣೆ, ದಾಸ್ತಾನು ಅಥವಾ ಮಾರಾಟದಲ್ಲಿ ಅಥವಾ ಅದರ ಸಂಬಂಧದಲ್ಲಿ ಯಾರೇ ಗುತ್ತಿಗೆದಾರನಿಂದ ಅಥವಾ ಅವನ ಮೂಲಕ ಅಥವಾ ಏಜೆಂಟನ ಮೂಲಕ ನಿಯೋಜಿತನಾದ ಯಾರೇ ವ್ಯಕ್ತಿಯು ಒಳಗೊಳ್ಳುತ್ತಾನೆ;

(ಇ) "ನಿಧಿ" ಎಂದರೆ, 3ನೇ ಪ್ರಕರಣದ ಅಡಿಯಲ್ಲಿ ಸ್ಥಾಪಿಸಲಾದ ಕರ್ನಾಟಕ ಸೇಂದಿ ಕೆಲಸಗಾರರ ಕಲ್ಯಾಣ ನಿಧಿ;

(ಎಫ್) "ತಯಾರಿಕೆ " ಎಂದರೆ, ಸೇಂದಿ ತಯಾರಿಕೆಯ ಮತ್ತು ಸಂಗ್ರಹಣೆಯ ಯಾವುದೇ ಪ್ರಕ್ರಿಯೆ ಮತ್ತು ಇದರಲ್ಲಿ ಸೇಂದಿ ಇಳಿಸುವುದಕ್ಕಾಗಿ ಒಂದು ಮರವನ್ನು ಸಿದ್ಧಗೊಳಿಸುವುದೂ ಒಳಗೊಳ್ಳುತ್ತದೆ;

(ಜಿ) "ಸದಸ್ಯ" ಎಂದರೆ, ನಿಧಿಯ ಒಬ್ಬ ಸದಸ್ಯ;

(ಹೆಚ್) "ಅನುಸೂಚಿ" ಎಂದರೆ, ಈ ಅಧಿನಿಯಮಕ್ಕೆ ಅನುಬಂಧಿಸಲಾದ ಅನುಸೂಚಿ;

(ಐ) "ಯೋಜನೆ" ಎಂದರೆ, ಈ ಅಧಿನಿಯಮದ ಅಡಿಯಲ್ಲಿ ರೂಪಿಸಲಾದ ಯೋಜನೆ;

(ಜೆ) "ಸೇಂದಿ" ಎಂದರೆ, ಕರ್ನಾಟಕ ಅಬಕಾರಿ ಅಧಿನಿಯಮ, 1965ರ 2ನೇ ಪ್ರಕರಣದ (27)ನೇ ಖಂಡದಲ್ಲಿ ಪರಿಭಾಷಿಸಲಾದ ಒಂದು ಅಬಕಾರಿ ಮರದಿಂದ ಇಳಿಸಲಾದ ಹುಳಿಬರಿಸಿದ ಅಥವಾ ಹುಳಿಬರಿಸದ ರಸ;

(ಕೆ) "ಮಜೂರಿಗಳು" ಎಂದರೆ, ಉದ್ಯೋಗದ ಕರಾರಿನ ನಿಬಂಧನೆಗಳಿಗೆ ಅನುಸಾರವಾಗಿ, ಒಬ್ಬ ನೌಕರನು ಕರ್ತವ್ಯದಲ್ಲಿದ್ದಾಗ ಅಥವಾ ಮಜೂರಿ ಸಹಿತ ರಜೆಯ ಮೇಲಿದ್ದಾಗ ಗಳಿಸಿದ ಮತ್ತು ಅವನಿಗೆ ನಗದು ರೂಪದಲ್ಲಿ ಸಂದಾಯ ಮಾಡಿದ ಅಥವಾ ಸಂದಾಯ ವಾಗಬೇಕಾದ ಎಲ್ಲ ಉಪಲಬ್ಧಿಗಳು, ಆದರೆ ಇವುಗಳು,-

(i) ಯಾವುದೇ ಆಹಾರ ರಿಯಾಯಿತಿಯ ನಗದು ಮೌಲ್ಯ;

(ii) ಅಧಿಕ ಕಾಲಿಕ ಭತ್ಯ, ಬೋನಸ್ ಮತ್ತು ಕಮೀಷನ್.

- ಒಳಗೊಳ್ಳುವುದಿಲ್ಲ.

**3. ಕರ್ನಾಟಕ ಸೇಂದಿ ಕೆಲಸಗಾರರ ಕಲ್ಯಾಣ ನಿಧಿಯ ಸ್ಥಾಪನೆ:-** (1) ಈ ಅಧಿನಿಯಮವು ಪ್ರಾರಂಭವಾದ ಮೇಲೆ, ರಾಜ್ಯ ಸರ್ಕಾರವು, ರಾಜ್ಯದಲ್ಲಿ ಮತ್ತು ರಾಜ್ಯಕ್ಕಾಗಿ, "ಕರ್ನಾಟಕ ಸೇಂದಿ ಕೆಲಸಗಾರರ ಕಲ್ಯಾಣ ನಿಧಿ" ಎಂದು ಕರೆಯಲಾಗುವ ನಿಧಿಯೊಂದನ್ನು ಸ್ಥಾಪಿಸತಕ್ಕದ್ದು ಮತ್ತು ಅದರಲ್ಲಿ,-

(ಎ) (3)ನೇ ಉಪ ಪ್ರಕರಣದ (ಎ) ಖಂಡದ ಅಡಿಯಲ್ಲಿ ಒಬ್ಬ ನಿಯೋಜಕನು ಕಾಲಕಾಲಕ್ಕೆ ನೀಡಲಾದಂಥ ಮೊತ್ತಗಳು;

(ಬಿ) (3)ನೇ ಉಪ ಪ್ರಕರಣದ (ಬಿ) ಖಂಡದ ಮೇರೆಗೆ ನೌಕರನು ಕಾಲಕಾಲಕ್ಕೆ ವಂತಿಗೆ ನೀಡತಕ್ಕಂಥ ಮೊತ್ತಗಳು;

(ಸಿ) (4)ನೇ ಉಪ ಪ್ರಕರಣದ ಅಡಿಯಲ್ಲಿ ಹೂಡಲಾದ ಅಥವಾ ಮರು ಹೂಡಿಕೆ ಮಾಡಲಾದ ನಿಧಿಯ ಮೊತ್ತದ ಮೇಲೆ ಕಾಲಕಾಲಕ್ಕೆ ಪ್ರಾಪ್ತವಾಗಬಹುದಾದಂಥ ಬಡ್ಡಿ,

- ಒಳಗೊಳ್ಳತಕ್ಕದ್ದು.

(2) ನಿಧಿಯು ಯೋಜನೆಯಲ್ಲಿ ಉಪಬಂಧ ಕಲ್ಪಿಸಬಹುದಾದಂಥ ರೀತಿಯಲ್ಲಿ ಮಂಡಲಿಯಲ್ಲಿ ನಿಹಿತವಾಗಿರತಕ್ಕದ್ದು ಮತ್ತು ಅದರಿಂದ ಆಡಳಿತ ನಿರ್ವಹಿಸತಕ್ಕದ್ದು.

(3) (ಎ) ನಿಯೋಜಕನು,

(i) ಪ್ರತಿಯೊಬ್ಬ ನೌಕರನಿಗೆ ತತ್ಕಾಲದಲ್ಲಿ ಸಂದಾಯ ಮಾಡಬೇಕಾದ ಮಜೂರಿಗಳ ಶೇಕಡಾ ಐದಕ್ಕೆ ಸಮನಾದ ಒಂದು ಮೊತ್ತವನ್ನು; ಮತ್ತು

(ii) ಪ್ರತಿಯೊಬ್ಬ ನೌಕರನಿಗೆ ತತ್ಕಾಲದಲ್ಲಿ ಸಂದಾಯ ಮಾಡಬೇಕಾದ ಮಜೂರಿಗಳ ಶೇಕಡಾ ಐದಕ್ಕೆ ಸಮನಾದ ಒಂದು ಮೊತ್ತವನ್ನು ಭವಿಷ್ಯ ನಿಧಿಯಾಗಿ;

(ಬಿ) ನೌಕರನು

ತತ್ಕಾಲದಲ್ಲಿ ತಾನು ಪಡೆಯುವ ಮಜೂರಿಗಳ ಶೇಕಡಾ ಐದಕ್ಕೆ ಸಮನಾದ ಒಂದು ಮೊತ್ತವನ್ನು;

- ನಿಧಿಗೆ ವಂತಿಗೆಯಾಗಿ ಕೊಡತಕ್ಕದ್ದು.

(4) ಮಂಡಳಿಯು, ಆಗಿಂದಾಗ್ಗೆ, ತಕ್ಷಣ ಅಗತ್ಯವಿರದ, ನಿಧಿಯಲ್ಲಿ ಜಮೆಯಲ್ಲಿರುವ ಎಲ್ಲ ಅಥವಾ ಯಾವುದೇ ಹಣವನ್ನು, ಅದನ್ನು ಖರ್ಚು ಮಾಡಬಹುದಾದ ಉದ್ದೇಶಕ್ಕಾಗಿ ರಾಜ್ಯ ಸರ್ಕಾರದ ಭದ್ರತೆಗಳಲ್ಲಿ ಅಥವಾ ಯಾವುದೇ ಅನುಸೂಚಿತ ಬ್ಯಾಂಕಿನಲ್ಲಿ ಹೂಡಿಕೆ ಮಾಡಬಹುದು ಅಥವಾ ಮರುಹೂಡಿಕೆ ಮಾಡಬಹುದು.

**4. ಯೋಜನೆ:-** (1) ರಾಜ್ಯ ಸರ್ಕಾರವು, ಸರ್ಕಾರಿ ರಾಜ್ಯಪತ್ರದಲ್ಲಿ ಅಧಿಸೂಚನೆಯ ಮೂಲಕ , ಕರ್ನಾಟಕ ಸೇಂದಿ ಕೆಲಸಗಾರರ ಕಲ್ಯಾಣ ನಿಧಿ ಯೋಜನೆಯೆಂದು ಕರೆಯಲಾಗುವ ಒಂದು ಯೋಜನೆಯನ್ನು ರೂಪಿಸಬಹುದು ಮತ್ತು ಅದು ಅನುಸೂಚಿಯಲ್ಲಿ ನಿರ್ದಿಷ್ಟಪಡಿಸಿದ ಎಲ್ಲ ವಿಷಯಗಳಿಗಾಗಿ ಅಥವಾ ಯಾವುವೇ ಉಪಬಂಧ ಕಲ್ಪಿಸಬಹುದು.

(2) ರಾಜ್ಯ ಸರ್ಕಾರವು, ಸರ್ಕಾರಿ ರಾಜ್ಯ ಪತ್ರದಲ್ಲಿ ಅಧಿಸೂಚನೆಯ ಮೂಲಕ, ಯೋಜನೆಯನ್ನು ಕಾಲಕಾಲಕ್ಕೆ ಉತ್ತರಾನ್ವಯವಾಗಿ ಅಥವಾ ಪೂರ್ವಾನ್ವಯವಾಗಿ ತಿದ್ದುಪಡಿ ಮಾಡಬಹುದು.

**5. ಮಂಡಳಿಯ ರಚನೆ:-** (1) ರಾಜ್ಯ ಸರ್ಕಾರವು, ಸರ್ಕಾರಿ ರಾಜ್ಯಪತ್ರದಲ್ಲಿ ಅಧಿಸೂಚನೆಯ ಮೂಲಕ, ಅದರಲ್ಲಿ ನಿರ್ದಿಷ್ಟಪಡಿಸಬಹುದಾದಂಥ ದಿನಾಂಕದಿಂದ ಜಾರಿಯಲ್ಲಿ ಬರುವಂತೆ, ನಿಧಿಯ ಆಡಳಿತ ನೋಡಿಕೊಳ್ಳುವ ಉದ್ದೇಶಕ್ಕಾಗಿ ಮತ್ತು ನಿಧಿಯಿಂದ ಮತ್ತು ನಿಧಿಯ ಪೈಕಿಯಿಂದ ಹಣಕಾಸು ಒದಗಿಸಲಾದ ಚಟುವಟಿಕೆಗಳ ಬಗ್ಗೆ ಮೇಲ್ವಿಚಾರಣೆ ಮಾಡಲು ಅಥವಾ ಅವುಗಳನ್ನು ಕಾರ್ಯಗತಗೊಳಿಸಲು ಕರ್ನಾಟಕ ಸೇಂದಿ ಕೆಲಸಗಾರರ ಕಲ್ಯಾಣ ನಿಧಿ ಮಂಡಳಿ ಎಂದು ಕರೆಯಲಾಗುವ ಒಂದು ಮಂಡಲಿಯನ್ನು ರಚಿಸತಕ್ಕದ್ದು.

(2) ಮಂಡಳಿಯು, ಶಾಶ್ವತ ಉತ್ತರಾಧಿಕಾರ ಮತ್ತು ಸಾಮಾನ್ಯ ಮೊಹರನ್ನು ಹೊಂದಿದ್ದು ಮೇಲೆ ಹೇಳಿರುವ ಹೆಸರಿನ ಒಂದು ನಿಗಮಿತ ನಿಕಾಯವಾಗಿರತಕ್ಕದ್ದು ಮತ್ತು ಅದು ಸದರಿ ಹೆಸರಿನಲ್ಲಿ ದಾವೆ ಹೂಡತಕ್ಕದ್ದು ಮತ್ತು ದಾವೆಗೆ ಗುರಿಯಾಗತಕ್ಕದ್ದು.

(3) ಮಂಡಳಿಯು, ರಾಜ್ಯ ಸರ್ಕಾರವು ಸರ್ಕಾರಿ ರಾಜ್ಯಪತ್ರದಲ್ಲಿ ಅಧಿಸೂಚನೆಯ ಮೂಲಕ ನೇಮಕ ಮಾಡಬಹುದಾದಷ್ಟು ಸಂಖ್ಯೆಯ ನಿರ್ದೇಶಕರನ್ನು ಒಳಗೊಂಡಿರತಕ್ಕದ್ದು, ಅವರ ಪೈಕಿ ಕಡೇ ಪಕ್ಷ ಒಬ್ಬನು, ಪರಿಶಿಷ್ಟ ಜಾತಿಗೆ ಸೇರಿದ ವ್ಯಕ್ತಿಯಾಗಿರತಕ್ಕದ್ದು ಮತ್ತು ಒಬ್ಬನು, ಸೇಂದಿ ಇಳಿಸುವವರ ಪೈಕಿಯವನಾಗಿರತಕ್ಕದ್ದು ಮತ್ತು ಅವರನ್ನು ಯೋಜನೆಯಲ್ಲಿ ಉಪಬಂಧಿಸಬಹುದಾದಂಥ ರೀತಿಯಲ್ಲಿ ಆಯ್ಕೆ ಮಾಡತಕ್ಕದ್ದು;

ಪರಂತು, ಮಂಡಳಿಯು, ರಾಜ್ಯ ಸರ್ಕಾರವನ್ನು ನಿಯೋಜಕನು ಮತ್ತು ನೌಕರರನ್ನು ಪ್ರತಿನಿಧಿಸುವಷ್ಟು ಸಮಾನ ಸಂಖ್ಯೆಯ ನಿರ್ದೇಶಕರನ್ನು ಒಳಗೊಂಡಿರತಕ್ಕದ್ದು.

(4) ರಾಜ್ಯ ಸರ್ಕಾರವು, ಮಂಡಳಿಯ ನಿರ್ದೇಶಕರಲ್ಲೊಬ್ಬನನ್ನು ಅಧ್ಯಕ್ಷನಾಗಿ ನೇಮಕ ಮಾಡತಕ್ಕದ್ದು.

(5) ಮಂಡಳಿಯ ಅಧ್ಯಕ್ಷರ ಮತ್ತು ಇತರ ಸದಸ್ಯರ ಪದಾವಧಿಯು ರಾಜ್ಯ ಸರ್ಕಾರದ ಇಚ್ಛೆಗೊಳಪಟ್ಟು, ಮೂರು ವರ್ಷಗಳಾಗಿರತಕ್ಕದ್ದು.

(6) ಮಂಡಳಿಯು, ತನ್ನಲ್ಲಿ ನಿಹಿತವಾಗಿರುವ ನಿಧಿಯ ಆಡಳಿತವನ್ನು ಯೋಜನೆಯಲ್ಲಿ ನಿರ್ದಿಷ್ಟಪಡಿಸಬಹುದಾದಂಥ ರೀತಿಯಲ್ಲಿ ನಿರ್ವಹಿಸತಕ್ಕದ್ದು.

**6. ಸಿಬ್ಬಂದಿ ಸದಸ್ಯರ ನೇಮಕಾತಿ:-** (1) ರಾಜ್ಯ ಸರ್ಕಾರವು, ಒಬ್ಬ ಮುಖ್ಯ ಕಲ್ಯಾಣ ನಿಧಿ ಪರಿಶೀಲಕನು ತನ್ನ ಕರ್ತವ್ಯಗಳನ್ನು ನಿರ್ವಹಿಸುವಲ್ಲಿ ಅವರಿಗೆ ನೆರವು ನೀಡಲು ತಾನು ಅಗತ್ಯವೆಂದು ಪರಿಗಣಿಸಬಹುದಾದಷ್ಟು ಸಂಖ್ಯೆಯ ಕಲ್ಯಾಣ ನಿಧಿ ಪರಿಶೀಲಕನನ್ನು ನೇಮಕ ಮಾಡಬಹುದು. ಮುಖ್ಯ ಕಲ್ಯಾಣ ನಿಧಿ ಪರಿಶೀಲಕನು ಮಂಡಳಿಯ ಮುಖ್ಯ ಕಾರ್ಯ ನಿರ್ವಾಹಕ ಅಧಿಕಾರಿಯಾಗಿರತಕ್ಕದ್ದು.

(2) ಮಂಡಲಿಯು, ರಾಜ್ಯ ಸರ್ಕಾರದ ಪೂರ್ವಾನುಮೋದನೆ ಪಡೆದು ತಾನು ಅಗತ್ಯವೆಂದು ಪರಿಗಣಿಸಬಹುದಾದಷ್ಟು ಸಂಖ್ಯೆಯ ಸಿಬ್ಬಂದಿಯನ್ನು ನೇಮಕ ಮಾಡಿಕೊಳ್ಳಬಹುದು.

(3) ಮುಖ್ಯ ಕಲ್ಯಾಣ ನಿಧಿ ಪರಿಶೀಲಕ ಮತ್ತು ಕಲ್ಯಾಣ ನಿಧಿ ಪರಿಶೀಲಕರ ನೌಕರಿ ಭರ್ತಿ ವಿಧಾನ, ಸಂಬಳ ಮತ್ತು ಭತ್ಯೆಗಳು, ಶಿಸ್ತು ಮತ್ತು ಇತರ ಸೇವಾ ಷರತ್ತುಗಳು ರಾಜ್ಯ ಸರ್ಕಾರವು ನಿರ್ದಿಷ್ಟಪಡಿಸಬಹುದಾದಂತೆ ಇರತಕ್ಕದ್ದು ಮತ್ತು ಮಂಡಳಿಯು ನೇಮಕ ಮಾಡಿಕೊಳ್ಳುವ ಸಿಬ್ಬಂದಿಯ ನೌಕರಿಭರ್ತಿ ವಿಧಾನ, ಸಂಬಳ ಮತ್ತು ಭತ್ಯೆಗಳು, ಶಿಸ್ತು ಮತ್ತು ಇತರ ಸೇವಾ ಷರತ್ತುಗಳು ರಾಜ್ಯ ಸರ್ಕಾರದ ಪೂರ್ವಾನುಮೋದನೆ ಪಡೆದು ಮಂಡಳಿಯು ನಿರ್ದಿಷ್ಟಪಡಿಸಬಹುದಾದಂತೆ ಇರತಕ್ಕದ್ದು.

**7. ನಿಯೋಜಕರಿಂದ ಬರಬೇಕಾದ ಮೊತ್ತದ ನಿರ್ಧಾರ:-** (1) ಮುಖ್ಯ ಕಲ್ಯಾಣ ನಿಧಿ ಪರಿಶೀಲಕನು ಅಥವಾ ಈ ಬಗ್ಗೆ ಅವನಿಂದ ಅಧಿಕೃತನಾದ ಯಾರೇ ಕಲ್ಯಾಣ ನಿಧಿ ಪರಿಶೀಲಕನು ಆದೇಶದ ಮೂಲಕ ಈ ಅಧಿನಿಯಮ ಅಥವಾ ಯೋಜನೆಯ ಉಪಬಂಧಗಳ ಅಡಿಯಲ್ಲಿ ಯಾರೇ ನಿಯೋಜಕನಿಂದ ಬರಬೇಕಾಗಿರುವ ಮೊತ್ತವನ್ನು ನಿರ್ಧರಿಸಬಹುದು ಮತ್ತು ಈ ಉದ್ದೇಶಕ್ಕಾಗಿ ತಾನು ಅಗತ್ಯವೆಂದು ಭಾವಿಸಬಹುದಾದಂಥ ವಿಚಾರಣೆಯನ್ನು ನಡೆಸಬಹುದು.

(2) (1)ನೇ ಉಪ ಪ್ರಕರಣದ ಅಡಿಯಲ್ಲಿ ವಿಚಾರಣೆಯನ್ನು ನಡೆಸುವ ಅಧಿಕಾರಿಯು ಈ ಮುಂದಿನ ವಿಷಯಗಳ ಸಂಬಂಧದಲ್ಲಿ ಅಂಥ ವಿಚಾರಣೆಯ ಉದ್ದೇಶಗಳಿಗಾಗಿ ಸಿವಿಲ್ ಪ್ರಕ್ರಿಯಾ ಸಂಹಿತೆ , 1908ರ ಅಡಿಯಲ್ಲಿ ಒಂದುದಾವೆಯನ್ನು ಅಧಿವಿಚಾರಣೆ ಮಾಡುವುದಕ್ಕಾಗಿ ನ್ಯಾಯಾಲಯದಲ್ಲಿ ನಿಹಿತವಾಗಿರುವಂಥವೇ ಅಧಿಕಾರಗಳನ್ನು ಹೊಂದಿರತಕ್ಕದ್ದು , ಎಂದರೆ:

(ಎ) ಯಾರೇ ವ್ಯಕ್ತಿಯ ಹಾಜರಾತಿಯನ್ನು ಒತ್ತಾಯಪಡಿಸುವುದು ಅಥವಾ ಪ್ರಮಾಣ ವಚನದ ಮೇಲೆ ಅವನನ್ನು ಪರೀಕ್ಷಿಸುವುದು ;

(ಬಿ) ದಸ್ತಾವೇಜುಗಳನ್ನು ಶೋಧಿಸುವಂತೆ ಮತ್ತು ಹಾಜರುಪಡಿಸುವಂತೆ ಅಗತ್ಯಪಡಿಸುವುದು;

(ಸಿ) ಶಪಥ ಪತ್ರದ ಮೇಲೆ ಸಾಕ್ಷ್ಯವನ್ನು ಪಡೆಯುವುದು; ಮತ್ತು

(ಡಿ) ಸಾಕ್ಷಿದಾರರ ಪರೀಕ್ಷೆಗಾಗಿ ಕಮಿಷನ್‌ಗಳನ್ನು ಹೊರಡಿಸುವುದು.

(3) ಈ ಪ್ರಕರಣದ ಅಡಿಯಲ್ಲಿನ ಯಾವುದೇ ವಿಚಾರಣೆಯನ್ನು, ಭಾರತ ದಂಡ ಸಂಹಿತೆಯ 198 ಮತ್ತು 228ನೇ ಪ್ರಕರಣಗಳ ಅರ್ಥವ್ಯಾಪ್ತಿಯಲ್ಲಿ ಮತ್ತು 196ನೇ ಪ್ರಕರಣದ ಉದ್ದೇಶಗಳಿಗಾಗಿ ನ್ಯಾಯಿಕ ವ್ಯವಹರಣೆ ಎಂದು ಭಾವಿಸತಕ್ಕದ್ದು.

(4) ನಿಯೋಜಕನಿಗೆ ಅಹವಾಲನ್ನು ಹೇಳಿಕೊಳ್ಳುವುದಕ್ಕೆ ಒಂದು ಸೂಕ್ತ ಅವಕಾಶವನ್ನು ನೀಡಿದ ಹೊರತು ಯಾರೇ ನಿಯೋಜಕನಿಂದ ಬರಬೇಕಾದ ಮೊತ್ತವನ್ನು ನಿರ್ಧರಿಸುವ ಆದೇಶವನ್ನು (1)ನೇ ಉಪ ಪ್ರಕರಣದ ಅಡಿಯಲ್ಲಿ ಮಾಡತಕ್ಕದ್ದಲ್ಲ.

(5) (1)ನೇ ಉಪ ಪ್ರಕರಣದ ಅಡಿಯಲ್ಲಿನ ಒಂದು ಆದೇಶದಿಂದ ಬಾಧಿತನಾದ ಯಾರೇ ವ್ಯಕ್ತಿಯು, ಆ ಆದೇಶವನ್ನು ಸ್ವೀಕರಿಸಿದ ದಿನಾಂಕದಿಂದ ಅರವತ್ತು ದಿನಗಳ ಒಳಗಾಗಿ ರಾಜ್ಯ ಸರ್ಕಾರಕ್ಕೆ ಅಥವಾ ರಾಜ್ಯ ಸರ್ಕಾರವು ನಿರ್ದಿಷ್ಟಪಡಿಸಬಹುದಾದಂಥ ಯಾವುದೇ ಇತರ ಪ್ರಾಧಿಕಾರಕ್ಕೆ ಅಪೀಲನ್ನು ಸಲ್ಲಿಸಬಹುದು ಮತ್ತು ಅಂಥ ಅಪೀಲಿನ ಮೇಲೆ ರಾಜ್ಯ ಸರ್ಕಾರದ ಅಥವಾ ಅಂಥ ಪ್ರಾಧಿಕಾರದ ತೀರ್ಮಾನವು ಅಂತಿಮವಾಗಿರತಕ್ಕದ್ದು.

**8. ನಿಯೋಜಕರಿಂದ ಬರಬೇಕಾದ ಹಣವನ್ನು ವಸೂಲಿ ಮಾಡುವ ವಿಧಾನ:–** ಈ ಅಧಿನಿಯಮದ ಉಪಬಂಧಗಳ ಅಥವಾ ಯೋಜನೆಯ ಅನುಸಾರವಾಗಿ ನಿಯೋಜಕನಿಂದ ಬರಬೇಕಾದ ಯಾವುದೇ ಮೊತ್ತವನ್ನು ಆ ಮೊತ್ತವು ಬಾಕಿಯಾಗಿದ್ದರೆ ಅದನ್ನು ವರ್ಷಕ್ಕೆ ಶೇಕಡಾ 9ರ ದರದಲ್ಲಿ ಅದರ ಮೇಲಿನ ಬಡ್ಡಿಯೊಂದಿಗೆ ಭೂ ಕಂದಾಯದ ಬಾಕಿಯಂತೆ ವಸೂಲು ಮಾಡತಕ್ಕದ್ದು.

**9. ಜಫ್ತಿಗೆ ನಿಷೇಧ.-** (1) ನಿಧಿಯಲ್ಲಿ ಯಾರೇ ಸದಸ್ಯನ ಜಮೆಯಲ್ಲಿ ಇರುವ ಮೊತ್ತವು, ಯಾವುದೇ ರೀತಿಯಲ್ಲಿ ಹಸ್ತಾಂತರಿಸಲು ಅಥವಾ ವಶಪಡಿಸಿಕೊಳ್ಳಲು ಸಾಧ್ಯವಾಗುವಂತಿರತಕ್ಕದ್ದಲ್ಲ ಮತ್ತು ಸದಸ್ಯನು ಮಾಡಿದ ಯಾವುದೇ ಋಣ ಅಥವಾ ಹೊಣೆಗಾರಿಕೆಯ ಸಂಬಂಧದಲ್ಲಿ ಯಾವುದೇ ನ್ಯಾಯಾಲಯದ ಯಾವುದೇ ಡಿಕ್ರಿ ಅಥವಾ ಆದೇಶದ ಅಡಿಯಲ್ಲಿ ಜಪ್ತಿಗೆ ಗುರಿಯಾಗತಕ್ಕದ್ದಲ್ಲ ಮತ್ತು ಪ್ರಾಂತೀಯ ದಿವಾಳಿತನ ಅಧಿನಿಯಮ, 1920ರ ಅಡಿಯಲ್ಲಿ ನೇಮಕಗೊಂಡ ಯಾರೇ ಸ್ವೀಕರ್ತನು ಅಂಥ ಯಾವುದೇ ಮೊತ್ತದ ಮೇಲೆ ಯಾವುದೇ ಕ್ಲೇಮಿಗೆ ಹಕ್ಕನ್ನು ಅಥವಾ ಕ್ಲೇಮನ್ನು ಹೊಂದಿರತಕ್ಕದ್ದಲ್ಲ.

(2) ಒಬ್ಬ ಸದಸ್ಯನ ಮರಣದ ಸಮಯದಲ್ಲಿ ನಿಧಿಯಲ್ಲಿ ಅವನ ಜಮೆಯಲ್ಲಿರುವ ಮತ್ತು ಯೋಜನೆಯ ಅಡಿಯಲ್ಲಿ ಅವನ ನಾಮ ನಿರ್ದೇಶಿತನಿಗೆ ಸಂದಾಯವಾಗಬೇಕಾದ ಯಾವುದೇ ಮೊತ್ತವು, ಯೋಜನೆಯ ಮೂಲಕ ಅಧಿಕೃತಗೊಳಿಸಲಾದ ಯಾವುದೇ ಕಡಿತಕ್ಕೆ ಒಳಪಟ್ಟು ನಾಮನಿರ್ದೇಶಿತನಲ್ಲಿ ನಿಹಿತವಾಗಿರತಕ್ಕದ್ದು ಮತ್ತು ಸದಸ್ಯನ ಮರಣದ ಪೂರ್ವದಲ್ಲಿ, ಮೃತನು ಅಥವಾ ನಾಮನಿರ್ದೇಶಿತನು ಮಾಡಿದ ಯಾವುದೇ ಋಣ ಅಥವಾ ಇತರ ಹೊಣೆಗಾರಿಕೆಗಳಿಂದ ಮುಕ್ತವಾಗಿರತಕ್ಕದ್ದು.

**10. ಇತರ ಋಣಗಳಿಗೆ ಮೊದಲು ವಂತಿಗೆಗಳನ್ನು ಸಂದಾಯ ಮಾಡುವುದಕ್ಕೆ ಆದ್ಯತೆ:–** ಯಾರೇ ನಿಯೋಜಕನು ಒಬ್ಬ ನ್ಯಾಯ ನಿರ್ಣೀತ ದಿವಾಳಿಯಾಗಿರುವಲ್ಲಿ, ಅಥವಾ ಒಂದು ಕಂಪನಿಯಾಗಿದ್ದು ಅದರ ಸಮಾಪನಕ್ಕೆ ಒಂದು ಆದೇಶವನ್ನು ಮಾಡಲಾಗಿರುವಲ್ಲಿ, ಈ ಯೋಜನೆಯ ಅಡಿಯಲ್ಲಿ ನಿಯೋಜಕನಿಂದ ಬರಬೇಕಾಗಿರುವ ಮೊತ್ತವು, ನ್ಯಾಯನಿರ್ಣಯ ಅಥವಾ ಸಮಾಪನದ ಆದೇಶವನ್ನು ಮಾಡುವುದಕ್ಕೆ ಮುಂಚೆ ಅದರ ಹೊಣೆಗಾರಿಕೆಯು ಪ್ರಾಪ್ತವಾಗಿರುವಲ್ಲಿ, ದಿವಾಳಿಯ ಸ್ವತ್ತನ್ನು ಅಥವಾ ಸಂದರ್ಭಾನುಸಾರ, ಕಂಪನಿಯ ಆಸ್ತಿಯನ್ನು ಹಂಚಿಕೆ ಮಾಡುವಾಗ, ಇತರ ಎಲ್ಲ ಋಣಗಳಿಗಿಂತ ಆದ್ಯತೆ ನೀಡಿ, ಪ್ರಾಂತೀಯ ದಿವಾಳಿತನ ಅಧಿನಿಯಮ, 1920ರ 61ನೇ ಪ್ರಕರಣದ ಅಡಿಯಲ್ಲಿ ಅಥವಾ ಕಂಪನಿಗಳ ಅಧಿನಿಯಮ, 1956ರ 530ನೇ ಪ್ರಕರಣದ ಅಡಿಯಲ್ಲಿ ಸಂದಾಯ ಮಾಡಬೇಕಾಗಿರುವ ಋಣಗಳ ಪೈಕಿ ಸೇರಿದೆಯೆಂದು ಭಾವಿಸತಕ್ಕದ್ದು.

**11. ನಿಯೋಜಕನು ಮಜೂರಿಗಳು, ಇತ್ಯಾದಿಯನ್ನು ಕಡಿಮೆ ಮಾಡದಿರುವುದು:–** ಯಾರೇ ನಿಯೋಜಕನು, ನಿಧಿಗೆ ಯಾವುದೇ ವಂತಿಗೆಯನ್ನು ಸಂದಾಯ ಮಾಡುವುದಕ್ಕಾಗಿ ತನ್ನ ಹೊಣೆಗಾರಿಕೆ ಇರುವ ಕಾರಣ ಮಾತ್ರದಿಂದಲೇ ಈ ಯೋಜನೆಯು ಅನ್ವಯವಾಗುವ ಯಾರೇ ನೌಕರನ ಮಜೂರಿಗಳನ್ನು ಅಥವಾ ತನ್ನ ಉದ್ಯೋಗದ ವ್ಯಕ್ತ ಅಥವಾ ಇಂಗಿತ ನಿಬಂಧನೆಗಳ ಅಡಿಯಲ್ಲಿ ನೌಕರನು ಹಕ್ಕು ಹೊಂದಿರುವ ಪ್ರಯೋಜನಗಳ ಒಟ್ಟು ಪ್ರಮಾಣವನ್ನು ಪ್ರತ್ಯಕ್ಷವಾಗಿ ಅಥವಾ ಪರೋಕ್ಷವಾಗಿ ಕಡಿಮೆ ಮಾಡತಕ್ಕದ್ದಲ್ಲ.

**12. ಮಂಡಲಿಯ ಸದಸ್ಯರು ಲೋಕ ನೌಕರರಾಗಿರುವುದು:–** ಈ ಅಧಿನಿಯಮದ ಅಡಿಯಲ್ಲಿ ನೇಮಕಗೊಂಡ ಮಂಡಲಿಯ ಪ್ರತಿಯೊಬ್ಬ ನಿರ್ದೇಶಕ, ಮುಖ್ಯ ಕಲ್ಯಾಣ ನಿಧಿ ಪರಿಶೀಲಕ ಮತ್ತು ಪ್ರತಿಯೊಬ್ಬ ಕಲ್ಯಾಣ ನಿಧಿ ಪರಿಶೀಲಕ ಮತ್ತು ಮಂಡಲಿಯ ಪ್ರತಿಯೊಬ್ಬ ಸಿಬ್ಬಂದಿ ಸದಸ್ಯನನ್ನು ಭಾರತ ದಂಡ ಸಂಹಿತೆಯ 21ನೇ ಪ್ರಕರಣದ ಅರ್ಥ ವ್ಯಾಪ್ತಿಯೊಳಗೆ ಲೋಕ ನೌಕರನೆಂದು ಭಾವಿಸತಕ್ಕದ್ದು.

**13. ದಂಡ, ಇತ್ಯಾದಿ.-** (1) ಯಾರೇ ವ್ಯಕ್ತಿಯು ಈ ಅಧಿನಿಯಮದ ಅಡಿಯಲ್ಲಿ ಅಥವಾ ಈ ಯೋಜನೆಯಡಿಯಲ್ಲಿ ತಾನು ಮಾಡಬೇಕಾದ ಯಾವುದೇ ಸಂದಾಯವನ್ನು ತಪ್ಪಿಸಿಕೊಳ್ಳುವ ಉದ್ದೇಶಕ್ಕಾಗಿ ಅಥವಾ ಯಾರೇ ಇತರ ವ್ಯಕ್ತಿಯು ಅಂಥ ಸಂದಾಯ ಮಾಡುವುದನ್ನು ತಪ್ಪಿಸಿಕೊಳ್ಳುವ ಉದ್ದೇಶಕ್ಕಾಗಿ ಅಥವಾ ಯಾರೇ ಇತರ ವ್ಯಕ್ತಿಯು ಅಂಥ ಸಂದಾಯ ಮಾಡುವುದನ್ನು ತಪ್ಪಿಸಿಕೊಳ್ಳಲು ಸಾಧ್ಯವಾಗುವಂತೆ ಮಾಡುವ ಉದ್ದೇಶಕ್ಕಾಗಿ ಗೊತ್ತಿದ್ದೂ ಸುಳ್ಳುಹೇಳಿಕೆಯನ್ನು ಅಥವಾ ಸುಳ್ಳು ಮನವಿಯನ್ನು ನೀಡಿದರೆ ಅಥವಾ ನೀಡುವಂತೆ ಮಾಡಿದರೆ ಅವನು, ಮೂರು ತಿಂಗಳವರೆಗೆ ವಿಸ್ತರಿಸಬಹುದಾದ ಅವಧಿಯ ಕಾರಾವಾಸದಿಂದ ಅಥವಾ ಐದುನೂರು ರೂಪಾಯಿಗಳವರೆಗೆ ವಿಸ್ತರಿಸಬಹುದಾದ ಜುಲ್ಮಾನೆಯಿಂದ ಅಥವಾ ಅವೆರಡರಿಂದಲೂ ದಂಡಿತನಾಗತಕ್ಕದ್ದು.

(2) ಯಾರೇ ವ್ಯಕ್ತಿಯು ಈ ಅಧಿನಿಯಮದ ಅಥವಾ ಯೋಜನೆಯ ಯಾವುವೇ ಉಪಬಂಧಗಳನ್ನು ಉಲ್ಲಂಘಿಸಿದಲ್ಲಿ ಅಥವಾ ಪಾಲಿಸಲು ತಪ್ಪಿದಲ್ಲಿ, ಹಾಗೆ ಉಲ್ಲಂಘಿಸುವುದಕ್ಕೆ ಅಥವಾ ಪಾಲಿಸದಿರುವುದಕ್ಕೆ ಬೇರೆಡೆಯಲ್ಲಿ ಈ ಅಧಿನಿಯಮದ ಮೂಲಕ ಅಥವಾ ಅಡಿಯಲ್ಲಿ ಇತರ ಯಾವುದೇ ದಂಡವನ್ನು ವಿಧಿಸಲು ಉಪಬಂಧಿಸಿರದಿದ್ದರೆ, ಅವನು ಮೂರು ತಿಂಗಳವರೆಗೆ ವಿಸ್ತರಿಸಬಹುದಾದ ಅವಧಿಯ ಕಾರಾವಾಸದಿಂದ ಅಥವಾ ಐದುನೂರು ರೂಪಾಯಿಗಳವರೆಗೆ ವಿಸ್ತರಿಸಬಹುದಾದ ಜುಲ್ಮಾನೆಯಿಂದ ಅಥವಾ ಅವೆರಡರಿಂದಲೂ ದಂಡಿತನಾಗತಕ್ಕದ್ದು.

(3) ರಾಜ್ಯ ಸರ್ಕಾರ ಅಥವಾ ರಾಜ್ಯ ಸರ್ಕಾರವು ಈ ಬಗ್ಗೆ ನಿರ್ದಿಷ್ಟಪಡಿಸಬಹುದಾದ ಇತರ ಪ್ರಾಧಿಕಾರದ ಪೂರ್ವಾನುಮೋದನೆ ಪಡೆದು ಈ ಅಧಿನಿಯಮದ ಅಡಿಯಲ್ಲಿ ದಂಡನೀಯವಾದ ಅಪರಾಧವನ್ನು ಉಂಟುಮಾಡಿರುವ ಸಂಗತಿಗಳ ಬಗ್ಗೆ ಸಲ್ಲಿಸಿದ ಲಿಖಿತ ವರದಿಯ ಮೇಲೆ ಹೊರತು, ಅಂಥ ಯಾವುದೇ ಅಪರಾಧವನ್ನು ಯಾವುದೇ ನ್ಯಾಯಾಲಯವು ಸಂಜ್ಞಾನಕ್ಕೆ ತೆಗೆದುಕೊಳ್ಳತಕ್ಕದ್ದಲ್ಲ.

**14. ಕಂಪನಿಗಳು ಇತ್ಯಾದಿಗಳಿಂದ ಅಪರಾಧಗಳು:-** (1) ಈ ಅಧಿನಿಯಮದ ಅಡಿಯಲ್ಲಿ ಅಪರಾಧವನ್ನು ಮಾಡಿದ ವ್ಯಕ್ತಿಯು ಒಂದು ಕಂಪನಿಯಾಗಿರುವಲ್ಲಿ ಆ ಅಪರಾಧವು ನಡೆದ ಸಮಯದಲ್ಲಿ ಆ ಕಂಪನಿಯ ಪ್ರಭಾರದಲ್ಲಿದ್ದ ಮತ್ತು ಆ ಕಂಪನಿಯ ವ್ಯವಹಾರಗಳನ್ನು ನಡೆಸುವ ಬಗ್ಗೆ ಕಂಪನಿಗೆ ಜವಾಬ್ದಾರರಾಗಿದ್ದ ಪ್ರತಿಯೊಬ್ಬ ವ್ಯಕ್ತಿಯನ್ನು ಹಾಗೂ ಕಂಪನಿಯನ್ನು ಆ ಅಪರಾಧದ ದೋಷಿಯೆಂದು ಭಾವಿಸತಕ್ಕದ್ದು ಮತ್ತು ಅವರು ತಮ್ಮ ವಿರುದ್ಧದ ವ್ಯವಹರಣೆಗೆ ಗುರಿಯಾಗತಕ್ಕದ್ದು ಮತ್ತು ತದನುಸಾರವಾಗಿ ದಂಡಿತರಾಗತಕ್ಕದ್ದು :

ಪರಂತು, ಈ ಉಪ ಪ್ರಕರಣದಲ್ಲಿ ಇರುವುದು ಯಾವುದೂ, ಅಂಥ ಯಾರೇ ವ್ಯಕ್ತಿಯು ಆ ಅಪರಾಧವು ತನ್ನ ತಿಳಿವಳಿಕೆಗೆ ಬಾರದೆ ನಡೆಯಿತೆಂದು ಅಥವಾ ಅಂಥ ಅಪರಾಧ ನಡೆಯುವುದನ್ನು ತಡೆಗಟ್ಟಲು ತಾನು ಎಲ್ಲ ಯುಕ್ತ ಜಾಗರೂಕತೆ ವಹಿಸಿದ್ದೆನೆಂದು ರುಜುವಾತು ಪಡಿಸಿದರೆ, ಅವನನ್ನು ಯಾವುದೇ ದಂಡನೆಗೆ ಗುರಿಪಡಿಸತಕ್ಕದ್ದಲ್ಲ.

(2) (1)ನೇ ಉಪ ಪ್ರಕರಣದಲ್ಲಿ ಏನೇ ಒಳಗೊಂಡಿದ್ದರೂ, ಈ ಪ್ರಕರಣದ ಅಡಿಯಲ್ಲಿನ ಅಪರಾಧವನ್ನು ಒಂದು ಕಂಪನಿಯು ಮಾಡಿರುವಲ್ಲಿ ಮತ್ತು ಆ ಅಪರಾಧವು ಕಂಪನಿಯ ಯಾರೇ ನಿರ್ದೇಶಕ, ವ್ಯವಸ್ಥಾಪಕ, ಕಾರ್ಯದರ್ಶಿ ಅಥವಾ ಇತರ ಅಧಿಕಾರಿಯ ಸಮ್ಮತಿಯಿಂದ ಅಥವಾ ಪರೋಕ್ಷ ಸಮ್ಮತಿಯಿಂದ ನಡೆದಿದೆಯೆಂದು ಅಥವಾ ಅವರ ನಿರ್ಲಕ್ಷ್ಯತೆಯ ಕಾರಣದಿಂದ ನಡೆದಿದೆಯೆಂದು ಆರೋಪಿಸಬಹುದಾಗಿದೆಯೆಂದು ರುಜುವಾತಾದರೆ, ಅಂಥ ನಿರ್ದೇಶಕ , ವ್ಯವಸ್ಥಾಪಕ, ಕಾರ್ಯದರ್ಶಿ ಅಥವಾ ಇತರ ಅಧಿಕಾರಿಯನ್ನು ಸಹ ಆ ಅಪರಾಧದ ದೋಷಿಯೆಂದು ಭಾವಿಸತಕ್ಕದ್ದು ಮತ್ತು ಅವರು ತಮ್ಮ ವಿರುದ್ಧದ ವ್ಯವಹರಣೆಗೆ ಗುರಿಯಾಗತಕ್ಕದ್ದು. ಮತ್ತು ತದನುಸಾರವಾಗಿ ದಂಡಿತರಾಗತಕ್ಕದ್ದು.

ವಿವರಣೆ:- ಈ ಪ್ರಕರಣದ ಉದ್ದೇಶಗಳಿಗಾಗಿ.

(ಎ) "ಕಂಪನಿ" ಎಂದರೆ, ಯಾವುದೇ ನಿಗಮಿತ ನಿಕಾಯ ಮತ್ತು ಅದು ಒಂದು ಫರ್ಮ್‌ನ್ನು ಅಥವಾ ವ್ಯಕ್ತಿಗಳ ಇತರ ಸಂಘವನ್ನು ಒಳಗೊಳ್ಳುತ್ತದೆ; ಮತ್ತು

(ಬಿ) ಫರ್ಮಿಗೆ ಸಂಬಂಧಿಸಿದಂತೆ "ನಿರ್ದೇಶಕ" ಎಂದರೆ ಫರ್ಮಿನ ಒಬ್ಬ ಪಾಲುದಾರ.

**15. ಹಾನಿ ಪರಿಹಾರಗಳ ವಸೂಲಿಗೆ ಅಧಿಕಾರ:-** ಯಾರೇ ನಿಯೋಜಕನು, ಈ ಅಧಿನಿಯಮದ ಮೇರೆಗೆ ನಿಧಿಗೆ ಯಾವುವೇ ವಂತಿಗೆಗಳನ್ನು ಸಂದಾಯ ಮಾಡಲು ತಪ್ಪಿರುವಲ್ಲಿ, ರಾಜ್ಯ ಸರ್ಕಾರವು, ತಾನು ವಿಧಿಸಲು ಸೂಕ್ತವೆಂದು ಆಲೋಚಿಸಬಹುದಾದಂತೆ ಬಾಕಿ ಇರುವ ಮೊತ್ತದಲ್ಲಿ ಶೇಕಡಾ ಇಪ್ಪತ್ತೈದಕ್ಕೆ ಮೀರದಷ್ಟು ಮೊತ್ತದ ಹಾನಿ ಪರಿಹಾರವನ್ನು ನಿಯೋಜಕನಿಂದ ವಸೂಲು ಮಾಡಬಹುದು.

**16. ರಾಜ್ಯ ಸರ್ಕಾರದಿಂದ ನಿರ್ದೇಶನಗಳು.-** (1) ರಾಜ್ಯ ಸರ್ಕಾರವು, ಮಂಡಲಿಯೊಂದಿಗೆ ಸಮಾಲೋಚಿಸಿದ ತರುವಾಯ, ಮಂಡಲಿಯು ಅನುಸರಿಸಬೇಕಾದ ಸಾಮಾನ್ಯ ಸೂಚನೆಗಳನ್ನು ಮಂಡಲಿಗೆ ನೀಡಬಹುದು.

(2) ಮಂಡಲಿಯು, ಈ ಅಧಿನಿಯಮದ ಅಡಿಯಲ್ಲಿ ತನ್ನ ಅಧಿಕಾರಗಳನ್ನು ಚಲಾಯಿಸುವಲ್ಲಿ ಮತ್ತು ತನ್ನ ಕರ್ತವ್ಯಗಳನ್ನು ನಿರ್ವಹಿಸುವಲ್ಲಿ ರಾಜ್ಯ ಸರ್ಕಾರದ ಪೂರ್ವಾನುಮತಿ ಪಡೆದ ಹೊರತು, (1)ನೇ ಉಪ ಪ್ರಕರಣದ ಅಡಿಯಲ್ಲಿ ಹೊರಡಿಸಲಾದ ಯಾವುವೇ ಸಾಮಾನ್ಯ ಸೂಚನೆಗಳನ್ನು ಪಾಲಿಸದೆ ಇರತಕ್ಕದ್ದಲ್ಲ.

**17. ಸದ್ಭಾವನೆಯಿಂದ ಕೈಗೊಂಡ ಕ್ರಮಗಳ ರಕ್ಷಣೆ:-** ಈ ಅಧಿನಿಯಮದ ಅಡಿಯಲ್ಲಿ ಅಥವಾ ಯೋಜನೆಯ ಅಡಿಯಲ್ಲಿ ಸದ್ಭಾವನೆಯಿಂದ ಮಾಡಲಾದ ಅಥವಾ ಮಾಡಲು ಉದ್ದೇಶಿಸಲಾದ ಯಾವುದೇ ಕ್ರಮಕ್ಕೆ ಸಂಬಂಧಿಸಿದಂತೆ ಮಂಡಲಿಯ ಯಾರೇ ನಿರ್ದೇಶಕ, ಅಥವಾ ಮುಖ್ಯ ಕಲ್ಯಾಣ ನಿಧಿ ಪರಿಶೀಲಕ ಅಥವಾ ಯಾರೇ ಕಲ್ಯಾಣ ನಿಧಿ ಪರಿಶೀಲಕ ಅಥವಾ ಮಂಡಲಿಯ ಯಾರೇ ಇತರ ಸಿಬ್ಬಂದಿ ಸದಸ್ಯನ ಅಥವಾ ಯಾರೇ ವ್ಯಕ್ತಿಯ ವಿರುದ್ಧ ಯಾವುದೇ ದಾವೆ ಅಥವಾ ಇತರ ಕಾನೂನು ವ್ಯವಹರಣೆಯನ್ನು ಹೂಡಲು ಅವಕಾಶವಿರತಕ್ಕದ್ದಲ್ಲ.

**18. ರೂಢಿಯ ಅಥವಾ ಒಪ್ಪಂದದ ಮೂಲಕ ಸ್ಥಾಪಿಸಲಾದ ಕಲ್ಯಾಣ ನಿಧಿಗಳನ್ನು ವರ್ಗಾವಣೆ ಮಾಡುವುದಕ್ಕಾಗಿ ಅಥವಾ ನಿಹಿತಗೊಳಿಸುವುದಕ್ಕಾಗಿ ವಿಶೇಷ ಉಪಬಂಧಗಳು:-** ಈ ಅಧಿನಿಯಮದ ಪ್ರಾರಂಭವಾದ ದಿನಾಂಕಕ್ಕೆ ಮುಂಚೆ ರೂಢಿಗಳು ಅಥವಾ ಒಪ್ಪಂದದ ಮೂಲಕ ಸ್ಥಾಪಿಸಲಾದ ಮತ್ತು ಈ ಅಧಿನಿಯಮವು ಪ್ರಾರಂಭದ ದಿನಾಂಕದಂದು, ಯಾರೇ ನೌಕರನ ಜಮೆಯಲ್ಲಿರುವ ಎಲ್ಲ ಕಲ್ಯಾಣ ನಿಧಿಯು ತತ್ಕಾಲದಲ್ಲಿ ಜಾರಿಯಲ್ಲಿರುವ ಯಾವುದೇ ಕಾನೂನಿನಲ್ಲಿ, ಅಥವಾ ಯಾವುದೇ ಬಂಧ ಪತ್ರದಲ್ಲಿ ಅಥವಾ ಇತರ ಲಿಖಿತದಲ್ಲಿ ತದ್ವಿರುದ್ಧವಾದುದು ಏನೇ ಇದ್ದರೂ, ನಿಧಿಗೆ ವರ್ಗಾವಣೆಯಾಗತಕ್ಕದ್ದು ಮತ್ತು ಅದರಲ್ಲಿ ನಿಹಿತವಾಗತಕ್ಕದ್ದು ಮತ್ತು ನಿಧಿಯಲ್ಲಿ ಅದಕ್ಕೆ ಹಕ್ಕುಳ್ಳ ನೌಕರರ ಲೆಕ್ಕಕ್ಕೆ ಜಮೆಯಾಗತಕ್ಕದ್ದು.

**19. ಸಿವಿಲ್ ನ್ಯಾಯಾಲಯದ ಅಧಿಕಾರ ವ್ಯಾಪ್ತಿಗೆ ಪ್ರತಿಷೇಧ:-** ಈ ಅಧಿನಿಯಮದ ಮೂಲಕ ಅಥವಾ ಅಡಿಯಲ್ಲಿ ರಾಜ್ಯ ಸರ್ಕಾರದ ಅಥವಾ ಮಂಡಳಿಯ ಅಥವಾ ಮುಖ್ಯ ಕಲ್ಯಾಣ ನಿಧಿ ಪರಿಶೀಲಕನ ಅಥವಾ ಯಾರೇ ಕಲ್ಯಾಣ ನಿಧಿ ಪರಿಶೀಲಕನ ಮೂಲಕ ಇತ್ಯರ್ಥಗೊಳಿಸಬೇಕೆಂದು, ತೀರ್ಮಾನಿಸಬೇಕೆಂದು ಅಥವಾ ವ್ಯವಹರಿಸಬೇಕೆಂದು ಅಥವಾ ನಿರ್ಧರಿಸಬೇಕೆಂದು ಅಗತ್ಯಪಡಿಸಲಾದಂಥ ಯಾವುದೇ ಪ್ರಶ್ನೆಯನ್ನು ಇತ್ಯರ್ಥಗೊಳಿಸಲು, ತೀರ್ಮಾನಿಸಲು ಅಥವಾ ಅದರೊಂದಿಗೆ ವ್ಯವಹರಿಸಲು ಅಥವಾ ಯಾವುದೇ ವಿಷಯವನ್ನು ನಿರ್ಧರಿಸಲು ಯಾವುದೇ ಸಿವಿಲ್ ನ್ಯಾಯಾಲಯವು ಅಧಿಕಾರ ವ್ಯಾಪ್ತಿಯನ್ನು ಹೊಂದಿರತಕ್ಕದ್ದಲ್ಲ.

**20. ನಿಯಮಗಳ ರಚನಾಧಿಕಾರ:-** (1) ರಾಜ್ಯ ಸರ್ಕಾರವು, ಈ ಅಧಿನಿಯಮದ ಉಪಬಂಧಗಳನ್ನು ಜಾರಿಯಲ್ಲಿ ತರುವ ಉದ್ದೇಶಕ್ಕಾಗಿ ಸರ್ಕಾರಿ ರಾಜ್ಯಪತ್ರದಲ್ಲಿ ಅಧಿಸೂಚನೆಯ ಮೂಲಕ ನಿಯಮಗಳನ್ನು ರಚಿಸಬಹುದು.

(2) ಈ ಅಧಿನಿಯಮದಡಿಯಲ್ಲಿ ರಚಿಸಿದ ಪ್ರತಿಯೊಂದು ನಿಯಮವನ್ನು, ಅದನ್ನು ರಚಿಸಿದ ತರುವಾಯ, ಆದಷ್ಟು ಬೇಗನೆ ರಾಜ್ಯ ವಿಧಾನ ಮಂಡಲದ ಪ್ರತಿಯೊಂದು ಸದನದ ಮುಂದೆ, ಅದು ಅಧಿವೇಶನದಲ್ಲಿರುವಾಗ, ಒಂದು ಅಧಿವೇಶನದಲ್ಲಿ, ಅಥವಾ ಒಂದಾದ ಮೇಲೊಂದರಂತೆ ಬರುವ ಎರಡು ಅಥವಾ ಹೆಚ್ಚು ಅಧಿವೇಶನಗಳಲ್ಲಿ ಅಡಕವಾಗಬಹುದಾದ ಒಟ್ಟು ಮೂವತ್ತು ದಿನಗಳ ಅವಧಿಯವರೆಗೆ ಇಡತಕ್ಕದ್ದು ಮತ್ತು ಅದನ್ನು ಹಾಗೆ ಇಡಲಾದ ಅಧಿವೇಶನದ ಅಥವಾ ನಿಕಟೋತ್ತರದ ಅಧಿವೇಶನದ ಮುಕ್ತಾಯಕ್ಕೆ ಮುಂಚೆ, ಎರಡೂ ಸದನಗಳು ಆ ನಿಯಮದಲ್ಲಿ ಯಾವುದೇ ಮಾರ್ಪಾಟನ್ನು ಮಾಡಬೇಕೆಂದು ಒಪ್ಪಿದರೆ ಅಥವಾ ಆ ನಿಯಮವನ್ನು ರಚಿಸಬಾರದೆಂದು ನಿರ್ಧರಿಸಿದರೆ, ಆ ತರುವಾಯ, ಆ ನಿಯಮವು, ಸಂದರ್ಭಾನುಸಾರ, ಹಾಗೆ ಮಾರ್ಪಾಟಾದ ರೂಪದಲ್ಲಿ ಮಾತ್ರ ಪರಿಣಾಮಕಾರಿಯಾಗತಕ್ಕದ್ದು ಅಥವಾ ಪರಿಣಾಮಕಾರಿಯಾಗತಕ್ಕದ್ದಲ್ಲ; ಆದಾಗ್ಯೂ, ಅಂಥ ಯಾವುದೇ ಮಾರ್ಪಾಟು ಅಥವಾ ರದ್ದುಯಾತಿಯು, ಆ ನಿಯಮದ ಅಡಿಯಲ್ಲಿ ಈ ಹಿಂದೆ ಮಾಡಲಾದ ಯಾವುದೇ ಕಾರ್ಯದ ಮಾನ್ಯತೆಗೆ ಬಾಧಕವನ್ನುಂಟು ಮಾಡತಕ್ಕದ್ದಲ್ಲ.

**21. ಅನುಸೂಚಿಯ ತಿದ್ದುಪಡಿ:-** ರಾಜ್ಯ ಸರ್ಕಾರವು, ಅಧಿಸೂಚನೆಯ ಮೂಲಕ, ಅನುಸೂಚಿಗೆ ಯಾವುದೇ ವಿಷಯವನ್ನು ಸೇರಿಸಬಹುದು.

ಪರಂತು, ಈ ಅಧಿನಿಯಮದ ಉದ್ದೇಶಗಳಿಗೆ ಸಂಬಂಧಪಡದ ಯಾವುದೇ ವಿಷಯವನ್ನು ಹಾಗೆ ಸೇರಿಸತಕ್ಕದ್ದಲ್ಲ.

ಅನುಸೂಚಿ

(4(1)ನೇ ಪ್ರಕರಣ ನೋಡಿ)

**ಯೋಜನೆಯಲ್ಲಿ ಉಪಬಂಧ ಕಲ್ಪಿಸಬಹುದಾದ ವಿಷಯಗಳು:-**

1. ನಿಯೋಜಕರು ಮತ್ತು ನೌಕರರು ಅಥವಾ ಅವರ ಪರವಾಗಿ ಯಾವುವೇ ವಂತಿಗೆಗಳನ್ನು ನಿಧಿಗೆ ನೀಡತಕ್ಕ ಕಾಲ ಮತ್ತು ರೀತಿ (ನೇರ ನೇಮಕಾತಿ ಮಾಡಿಕೊಂಡಿರಲಿ ಅಥವಾ ಗುತ್ತಿಗೆದಾರರಿಂದ ಅಥವಾ ಅವರ ಮೂಲಕ ನೇಮಕ ಮಾಡಿಕೊಂಡಿರಲಿ) 3ನೇ ಪ್ರಕರಣದ ಅಡಿಯಲ್ಲಿ ಒಬ್ಬ ನೌಕರನು ನೀಡತಕ್ಕ ವಂತಿಗೆಗಳು ಮತ್ತು ಅಂಥ ವಂತಿಗೆಗಳನ್ನು ವಸೂಲು ಮಾಡತಕ್ಕ ವಿಧಾನ.

2. ಗುತ್ತಿಗೆದಾರರಿಂದ ಅಥವಾ ಅವರ ಮೂಲಕ ನಿಯೋಜಿತರಾಗಿರುವ ನೌಕರರಿಂದ ನೌಕರರ ವಂತಿಗೆಗಳನ್ನು ಅಂಥ ಗುತ್ತಿಗೆದಾರರು ವಸೂಲಿ ಮಾಡಬಹುದಾದ ವಿಧಾನ.

3. ನಿಯೋಜಕನಿಂದ ನಿಧಿಯ ಆಡಳಿತದ ವೆಚ್ಚವನ್ನು ಭರಿಸಲು ಅಗತ್ಯವಾಗಬಹುದಾದಷ್ಟು ಹಣದ ಮೊತ್ತದ ಸಂದಾಯ ಮತ್ತು ಅಂಥ ಸಂದಾಯವನ್ನು ಮಾಡತಕ್ಕ ದರ ಮತ್ತು ವಿಧಾನ.

4. ಸೇಂದಿ ಕೆಲಸಗಾರರ ಕಲ್ಯಾಣ ನಿಧಿ ಮಂಡಲಿಗೆ ನೆರವಾಗುವ ಸಲುವಾಗಿ ಯಾವುದೇ ಸಮಿತಿಯ ರಚನೆ.

5. ಲೆಕ್ಕ ಪತ್ರಗಳನ್ನು ಇಡತಕ್ಕ ವಿಧಾನ, ರಾಜ್ಯ ಸರ್ಕಾರವು ನೀಡಿದ ಯಾವುವೇ ನಿರ್ದೇಶನಗಳಿಗೆ ಅಥವಾ ನಿರ್ದಿಷ್ಟಪಡಿಸಿದ ಷರತ್ತುಗಳಿಗೆ ಅನುಸಾರವಾಗಿ ನಿಧಿಗೆ ಸೇರಿದ ಹಣದ ಹೂಡಿಕೆ, ಬಜೆಟ್ ತಯಾರಿಕೆ, ಲೆಕ್ಕ ಪರಿಶೋಧನೆ ಮತ್ತು ರಾಜ್ಯ ಸರ್ಕಾರಕ್ಕೆ ವರದಿಗಳ ಸಲ್ಲಿಕೆ.

6. ಯಾವ ಷರತ್ತುಗಳ ಮೇಲೆ ನಿಧಿಯಿಂದ ಹಣ ಹಿಂತೆಗೆದುಕೊಳ್ಳಲು ಅನುಮತಿ ನೀಡಬಹುದೋ ಮತ್ತು ಯಾವುದೇ ಕಡಿತ ಮಾಡಬಹುದೋ ಅಥವಾ ಮುಟ್ಟುಗೋಲು ಹಾಕಿಕೊಳ್ಳಬಹುದೋ ಆ ಷರತ್ತುಗಳು ಮತ್ತು ಅಂಥ ಕಡಿತದ ಮತ್ತು ಮುಟ್ಟುಗೋಲಿನ ಗರಿಷ್ಠ ಮೊತ್ತ.

7. ರಾಜ್ಯ ಸರ್ಕಾರವು ಮಂಡಲಿಯೊಂದಿಗೆ ಸಮಾಲೋಚಿಸಿ ಸದಸ್ಯರಿಗೆ ಸಂದಾಯ ಮಾಡಬೇಕಾದ ಬಡ್ಡಿಯ ದರವನ್ನು ನಿಗದಿಪಡಿಸುವುದು.

8. ಅಗತ್ಯಪಡಿಸಿದಾಗಲೆಲ್ಲ ಒಬ್ಬ ನೌಕರನು, ತನ್ನ ಮತ್ತು ತನ್ನ ಕುಟುಂಬದ ವಿವರಗಳನ್ನು ಒದಗಿಸತಕ್ಕ ನಮೂನೆ.

9. ಸದಸ್ಯನ ಮರಣದ ತರುವಾಯ, ಅವನ ಲೆಕ್ಕದಲ್ಲಿ ಇರುವ ಮೊಬಲಗನ್ನು ಸ್ವೀಕರಿಸಲು ಒಬ್ಬ ವ್ಯಕ್ತಿಯ ನಾಮ ನಿರ್ದೇಶನ ಮತ್ತು ಅಂಥ ನಾಮ ನಿರ್ದೇಶನದ ರದ್ದಿಯಾತಿ ಅಥವಾ ಬದಲಾವಣೆ.

10. ನೌಕರರಿಗೆ ಸಂಬಂಧಪಟ್ಟಂತೆ ನಿರ್ವಹಿಸಬೇಕಾದ ರಿಜಿಸ್ಟರು ಮತ್ತು ದಾಖಲೆಗಳು ಮತ್ತು ನಿಯೋಜಕರು ಅಥವಾ ಗುತ್ತಿಗೆದಾರರು ಒದಗಿಸಬೇಕಾದ ವಿವರ ಪಟ್ಟಿಕೆಗಳು.

11. ಯಾರೇ ನೌಕರನನ್ನು ಗುರುತಿಸುವ ಉದ್ದೇಶಕ್ಕಾಗಿನ ಯಾವುದೇ ಗುರುತಿನ ಚೀಟಿ, ಟೋಕನ್ ಅಥವಾ ಡಿಸ್ಕ್ ನ ನಮೂನೆ ಅಥವಾ ವಿನ್ಯಾಸ ಮತ್ತು ಅದರ ನೀಡಿಕೆ, ಅಭಿರಕ್ಷೆ ಮತ್ತು ಅದರ ಬದಲಾವಣೆ.

12. ಈ ಅಧಿನಿಯಮದಲ್ಲಿ ಅಥವಾ ಅನುಸೂಚಿಯಲ್ಲಿ ನಿರ್ದಿಷ್ಟಪಡಿಸಿದ ಯಾವುವೇ ಉದ್ದೇಶಗಳಿಗಾಗಿ ವಿಧಿಸಬೇಕಾದ ಫೀಜುಗಳು.

13. ಈ ಅಧಿನಿಯಮದ ಅಡಿಯಲ್ಲಿ ನೇಮಕಗೊಂಡ ಅಧಿಕಾರಿಗಳು ಚಲಾಯಿಸಬಹುದಾದ ಅಧಿಕಾರಗಳು ಯಾವುವಾದರೂ ಇದ್ದಲ್ಲಿ, ಅವು.

14. ಒಬ್ಬ ಸದಸ್ಯನು ಜೀವವಿಮೆಯ ಕಂತುಗಳನ್ನು ನಿಧಿಯಿಂದ ಸಂದಾಯ ಮಾಡಲು ಅನುಮತಿಸಬಹುದಾದ ಷರತ್ತುಗಳು.

15. ಮಂಡಲಿಯ ನಿರ್ದೇಶಕರನ್ನು ಆಯ್ಕೆಮಾಡತಕ್ಕ ಮತ್ತು ನೇಮಕ ಮಾಡತಕ್ಕ ವಿಧಾನ.

16. ಈ ಅಧಿನಿಯಮದ ಅಡಿಯಲ್ಲಿ ನೇಮಕಗೊಂಡ ಅಧಿಕಾರಿಗಳ ಸೇವಾ ಷರತ್ತುಗಳು, ಕರ್ತವ್ಯಗಳು ಮತ್ತು ಪರಿಶ್ರಮಧನ.

17. 18ನೇ ಪ್ರಕರಣದ ಅಡಿಯಲ್ಲಿ ನಿಹಿತವಾಗಿರುವ ಯಾವುದೇ ಕಲ್ಯಾಣ ನಿಧಿಯನ್ನು ನಿಧಿಯಲ್ಲಿನ ನೌಕರರ ಖಾತೆಗಳಿಗೆ ತರಬೇಕಾದ ಮತ್ತು ಜಮೆ ಮಾಡಬೇಕಾದ ವಿಧಾನ.

18. ಸದಸ್ಯರಿಗೆ ಸಂದಾಯ ಮಾಡಬೇಕಾದ ಭವಿಷ್ಯ ನಿಧಿಯ ದರ ಮತ್ತು ಅಂಥ ಸಂದಾಯಕ್ಕಾಗಿ ಷರತ್ತುಗಳು.

19. ಮಂಡಲಿಗೆ ಬರಬೇಕಾಗಿರುವ ಯಾವುದೇ ಮೊತ್ತವನ್ನು ಮನ್ನಾ ಮಾಡಬಹುದಾದ ಷರತ್ತುಗಳು.

20. ಯೋಜನೆಯಲ್ಲಿ ಉಪಬಂಧ ಕಲ್ಪಿಸಬೇಕಾದ ಅಥವಾ ಯೋಜನೆಯನ್ನು ಜಾರಿಗೊಳಿಸುವ ಉದ್ದೇಶಗಳಿಗಾಗಿ ಅವಶ್ಯ ಅಥವಾ ಯುಕ್ತವಾಗಬಹುದಾದ ಯಾವುದೇ ಇತರ ವಿಷಯ.

ಅಧಿಸೂಚನೆ

**ಬೆಂಗಳೂರು, ದಿನಾಂಕ 29ನೇ ಸೆಪ್ಟೆಂಬರ್ 1984 [ಸಂ.ಎಸ್‌ಡಬ್ಲ್ಯೂಎಲ್ 85, ಎಲ್‌ಬಿಡಬ್ಲ್ಯೂ 84]**

**ಎಸ್.ಓ 1387:-** ದಿನಾಂಕ 8 ನೇ ಜೂನ್ 1984ರ ಕರ್ನಾಟಕ ರಾಜ್ಯಪತ್ರದ (ವಿಶೇಷ ಸಂಚಿಕೆ) ಭಾಗ IV- 2ಬಿ ಯಲ್ಲಿ ಪ್ರಕಟವಾದ ಕರ್ನಾಟಕ ಸೇಂದಿ ಕೆಲಸಗಾರರ ಕಲ್ಯಾಣ ನಿಧಿ ಅಧಿನಿಯಮ, 1981ರ 1 ನೇ ಪ್ರಕರಣದ (2) ನೇ ಉಪ ಪ್ರಕರಣದಿಂದ ಪ್ರದತ್ತವಾದ ಅಧಿಕಾರಗಳನ್ನು ಚಲಾಯಿಸಿ, ಕರ್ನಾಟಕ ಸರ್ಕಾರವು, 1984ರ ಅಕ್ಟೋಬರ್ 2ನೇ ದಿನಾಂಕವನ್ನು ಸದರಿ ಅಧಿನಿಯಮವು ಜಾರಿಗೆ ಬರತಕ್ಕ ದಿನಾಂಕವೆಂದು ನಿರ್ದಿಷ್ಟಪಡಿಸುತ್ತದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಹೆಚ್.ಹೆಚ್.ಸೇಟ್,**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಮಾಜ ಕಲ್ಯಾಣ ಮತ್ತು ಕಾರ್ಮಿಕ ಇಲಾಖೆ.

(ದಿನಾಂಕ 1.10.1984ರ ಕರ್ನಾಟಕ ರಾಜ್ಯಪತ್ರ (ವಿಶೇಷ ಸಂಚಿಕೆ) ಭಾಗ -IV 2ಸಿ(ii) ರಲ್ಲಿ ಸಂಖ್ಯೆ 550 ಎಂದು ಪ್ರಕಟವಾಗಿದೆ)

The above translation of the Karnataka Toddy Workers Welfare Fund Act, 1981 (Karnataka Act 31 of 1984) shall be the authoritative text in Kannada Language under section 5A of the Karnataka Official Language Act, 1963 (Karnataka Act 26 of 1963).

GOVERNOR OF KARNATAKA
ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಜಿ.ಕೆ. ಬೋರೇಗೌಡ**
ಸರ್ಕಾರದ ಕಾರ್ಯದರ್ಶಿ,
ಸಂಸದೀಯ ವ್ಯವಹಾರಗಳು ಮತ್ತು ಶಾಸನ ರಚನೆ ಇಲಾಖೆ

ಪಿ.ಆರ್. 1290

## ಅಧಿಸೂಚನೆ

**ಸಂಖ್ಯೆ: ಸಂವ್ಯಶಾಇ 63 ರಾಶಾಪ್ರ 2006, ಬೆಂಗಳೂರು, ದಿನಾಂಕ: 31ನೇ ಜುಲೈ 2006**

ಕರ್ನಾಟಕ ಕಳ್ಳಭಟ್ಟಿವ್ಯಾಪಾರಿಗಳ, ಮಾದಕವಸ್ತು ಅಪರಾಧಿಗಳ ಜೂಜುಕೋರರ, ಗೂಂಡಾಗಳ, ಅನೈತಿಕ ವ್ಯವಹಾರ ಅಪರಾಧಿಗಳ ಮತ್ತು ಕೊಳಚೆ ಪ್ರದೇಶಗಳನ್ನು ಕಬಳಿಸುವವರ ಅಪಾಯಕಾರಿ ಚಟುವಟಿಕೆಗಳ ಪ್ರತಿಬಂಧಕ ಅಧಿನಿಯಮ, 1985ರ (1985ರ 12) ಅಧಿಕೃತ ಕನ್ನಡ ಭಾಷಾಂತರವನ್ನು ಕರ್ನಾಟಕ ಅಫಿಷಿಯಲ್ ಲಾಂಗ್ವಾಜ್ ಆಕ್ಟ್, 1963ರ ಪ್ರಕರಣ 5A ಅಡಿಯಲ್ಲಿ ರಾಜ್ಯಪಾಲರ ಅಧಿಕಾರದ ಮೇರೆಗೆ ಸಾರ್ವಜನಿಕರ ಮಾಹಿತಿಗಾಗಿ ಕರ್ನಾಟಕ ರಾಜ್ಯ ಪತ್ರದಲ್ಲಿ ಮರು ಪ್ರಕಟಿಸಲು ಆದೇಶಿಸಲಾಗಿದೆ.

## ಉದ್ದೇಶಗಳು ಮತ್ತು ಕಾರಣಗಳ ಹೇಳಿಕೆ

**I**

**1985ರ ಅಧಿನಿಯಮ 12:-** ಕಳ್ಳ ಭಟ್ಟಿವ್ಯಾಪಾರಿಗಳ, ಮಾದಕವಸ್ತು ಅಪರಾಧಿಗಳ, ಜೂಜುಕೋರರ, ಗೂಂಡಾಗಳ, ಅನೈತಿಕ ವ್ಯವಹಾರ ಅಪರಾಧಿಗಳ ಮತ್ತು ಕೊಳಚೆ ಪ್ರದೇಶಗಳನ್ನು ಕಬಳಿಸುವವರಂಥ ಕೆಲವು ಸಮಾಜ ವಿರೋಧಿ ಶಕ್ತಿಗಳ ಚಟುವಟಿಕೆಗಳು, ಕಾಲಕಾಲಕ್ಕೆ ಸಾರ್ವಜನಿಕರಲ್ಲಿ ಅಭದ್ರತೆಯ ಹಾಗೂ ಅಪಾಯದ ಭಾವನೆಯನ್ನು ಉಂಟು ಮಾಡಿವೆ. ಅಂಥ ವ್ಯಕ್ತಿಗಳಿಂದಾಗಿ ವಿಶೇಷವಾಗಿ ನಗರ ಪ್ರದೇಶಗಳಲ್ಲಿ ಜೀವನದ ಸಮಗತಿಗೆ ಆಗಿಂದಾಗ್ಗೆ ಧಕ್ಕೆಯುಂಟಾಗುತ್ತಿದೆ.

(2) ರಾಜ್ಯದಲ್ಲಿ ಈ ಕುಖ್ಯಾತ ಸಮಾಜ ವಿರೋಧಿ ಶಕ್ತಿಗಳ ಚಟುವಟಿಕೆಗಳು ಸಾರ್ವಜನಿಕ ಸುವ್ಯವಸ್ಥೆಯ ನಿರ್ವಹಣೆಯ ಮೇಲೆ ಪ್ರತಿಕೂಲ ಪರಿಣಾಮ ಉಂಟು ಮಾಡದಂತೆ ನೋಡಿಕೊಳ್ಳುವ ಸಲುವಾಗಿ ಈ ಮುಂದಿನ ವಿಷಯಗಳ ಬಗ್ಗೆ ಉಪಬಂಧ ಕಲ್ಪಿಸಲು ಒಂದು ವಿಶೇಷ ಶಾಸನವನ್ನು ಅಧಿನಿಯಮಿತಿಗೊಳಿಸುವುದು ಅವಶ್ಯವೆಂದು ಪರಿಗಣಿಸಲಾಗಿದೆ:-

(ಎ) "ಕಳ್ಳಭಟ್ಟಿ ವ್ಯಾಪಾರಿಗಳು", "ಮಾದಕ ವಸ್ತು ಅಪರಾಧಿಗಳು", "ಜೂಜುಕೋರರು", " ಗೂಂಡಾಗಳು", "ಅನೈತಿಕ ವ್ಯವಹಾರ ಅಪರಾಧಿಗಳು" ಮತ್ತು "ಕೊಳಚೆ ಪ್ರದೇಶಗಳನ್ನು ಕಬಳಿಸುವವರು" ಎಂಬ ಪದಗಳನ್ನು ನಿಖರವಾಗಿ ಪರಿಭಾಷಿಸುವುದು;

(ಬಿ) ಸಾರ್ವಜನಿಕ ಸುವ್ಯವಸ್ಥೆಯ ಮೇಲೆ ಪ್ರತಿಕೂಲ ಪರಿಣಾಮ ಉಂಟು ಮಾಡುವ ಅವರ ಚಟುವಟಿಕೆಗಳನ್ನು ನಿರ್ದಿಷ್ಟಪಡಿಸುವುದು; ಮತ್ತು

(ಸಿ) ಈ ಅಪಾಯಕಾರಿ ಚಟುವಟಿಕೆಗಳಲ್ಲಿ ತೊಡಗಿರುವ ವ್ಯಕ್ತಿಗಳ ಪ್ರತಿಬಂಧಕ ಸ್ಥಾನಬದ್ಧತೆಗೆ ಉಪಬಂಧ ಕಲ್ಪಿಸುವುದು.

3. ಈ ಸಮಾಜ ಘಾತುಕ ಶಕ್ತಿಗಳ ವರ್ಗದ ಅಪರಾಧಿಗಳಿಗೆ ಸಂಬಂಧಿಸಿದಂತೆ ರಾಷ್ಟ್ರೀಯ ಭದ್ರತಾ ಅಧಿನಿಯಮದ ಅಡಿಯಲ್ಲಿ ಪರಿಣಾಮಕಾರಿಯಾಗಿ ಕ್ರಮಕೈಗೊಳ್ಳಲಾಗದಿದ್ದುದರಿಂದಾಗಿ ಸಮಾಜ ಘಾತಕ ಶಕ್ತಿಗಳ ಈ ವರ್ಗವನ್ನು ದಮನ ಮಾಡಲು ತಮಿಳುನಾಡು ಮತ್ತು ಮಹಾರಾಷ್ಟ್ರ ರಾಜ್ಯಗಳು ಒಂದು ನಿರ್ದಿಷ್ಟ ಶಾಸನವನ್ನು ಜಾರಿಗೆ ತಂದಿವೆ.

4. ಸಾರ್ವಜನಿಕ ಹಿತದೃಷ್ಟಿಯಿಂದ ಕರ್ನಾಟಕದಲ್ಲಿಯೂ ಸಹ ಅಂಥದೇ ಒಂದು ಶಾಸನವನ್ನು ರಚಿಸಲು ಪ್ರಸ್ತಾವಿಸಲಾಗಿದೆ. (ದಿನಾಂಕ 25.3.85ರ ಕರ್ನಾಟಕ ರಾಜ್ಯಪತ್ರದ (ವಿಶೇಷ ಸಂಚಿಕೆ), ಭಾಗ IV- 2ಎ ಯಲ್ಲಿ ಪುಟ 13 ರಲ್ಲಿ ಪ್ರಕಟವಾಗಿದೆ)

**II**

**1987ರ ತಿದ್ದುಪಡಿ ಮಾಡುವ ಅಧಿನಿಯಮ 22:-** ಸ್ಥಾನ ಬದ್ಧತೆಗೆ ಸಂಬಂಧಪಟ್ಟಂತೆ ಪ್ರಕರಣದ ದಿನಾಂಕ ಅಥವಾ ಸಂಖ್ಯೆಯನ್ನು ನಿರೂಪಿಸುವಲ್ಲಿ ಉಂಟಾದ ತಪ್ಪು ಅಥವಾ ಸಂಬಂಧಪಟ್ಟ ಪ್ರಕರಣಗಳ ಹಂತವನ್ನು ತಿಳಿಸುವಲ್ಲಿ ಉಂಟಾದ ದೋಷ ಇವೇ ಮುಂತಾದ ತಾಂತ್ರಿಕ ಕಾರಣಗಳ ಮೇಲೆ ಅಥವಾ ಸ್ಥಾನಬದ್ಧತಾ ಆದೇಶವನ್ನು ಎತ್ತಿ ಹಿಡಿಯುವ ಸಂಬಂಧದಲ್ಲಿ ಕೆಲವೊಂದು ಕಾರಣಗಳು ಮಾನ್ಯವೆಂದು ಮತ್ತು ಪರ್ಯಾಪ್ತವಾಗಿವೆಯೆಂದು ಕಂಡು ಬಂದರೂ, ಸ್ಥಾನಬದ್ಧತೆಯ ಕಾರಣಗಳ ಪೈಕಿ ಒಂದು ಕಾರಣವು ಸ್ವಲ್ಪ ಮಟ್ಟಿಗೆ ದೋಷಪೂರಿತವಾಗಿದೆಯೆಂಬ ಕಾರಣ ಮಾತ್ರದಿಂದಾಗಿ ಉಚ್ಚ ನ್ಯಾಯಾಲಯದ ಮುಂದೆ ಪ್ರಶ್ನಿಸಲಾಗಿರುವ ಕೆಲವೊಂದು ಪ್ರಕರಣಗಳಲ್ಲಿ ಸ್ಥಾನಬದ್ಧತಾ ಆದೇಶವನ್ನು ಸಮರ್ಥಿಸುವ ಬಗೆಗಿನ ಕಾರ್ಯವಿಧಾನಕ್ಕೆ ಸಂಬಂಧಿಸಿದಂತೆ ರಾಜ್ಯ ಸರ್ಕಾರವು ಕೆಲವು ತೊಂದರೆಗಳನ್ನು ಎದುರಿಸಿದೆ.

ತಾಂತ್ರಿಕ ದೋಷವನ್ನು ನಿವಾರಿಸುವ ಸಲುವಾಗಿ, ಕಳ್ಳಭಟ್ಟಿ ವ್ಯಾಪಾರಿಗಳ, ಮಾದಕವಸ್ತು ಅಪರಾಧಿಗಳ, ಜೂಜುಕೋರರ, ಗೂಂಡಾಗಳ, ಅನೈತಿಕ ವ್ಯವಹಾರ ಅಪರಾಧಿಗಳ ಮತ್ತು ಕೊಳಚೆ ಪ್ರದೇಶಗಳನ್ನು ಕಬಳಿಸುವವರ ಅಪಾಯಕಾರಿ ಚಟುವಟಿಕೆಗಳ ಪ್ರತಿಬಂಧಕ (ತಿದ್ದುಪಡಿ) ಅಧ್ಯಾದೇಶ, 1987ನ್ನು ಉದ್ಘೋಷಿಸಲಾಯಿತು.

(ದಿನಾಂಕ 4.2.1987ರ ಕರ್ನಾಟಕ ರಾಜ್ಯಪತ್ರದ (ವಿಶೇಷ ಸಂಚಿಕೆ) ಭಾಗ **IV**-2ಎ ಯಲ್ಲಿ ಸಂಖ್ಯೆ 99 ಎಂದು ಪುಟ 5 ರಲ್ಲಿ ಪ್ರಕಟವಾಗಿದೆ.)

**III**

**2001 ರ ತಿದ್ದುಪಡಿ ಮಾಡುವ ಅಧಿನಿಯಮ 16:-** ಭಾರತ ದಂಡ ಸಂಹಿತೆ, 1860ರ VIII ನೇ ಅಧ್ಯಾಯದ ಅಡಿಯಲ್ಲಿ ಸಾರ್ವಜನಿಕ ನೆಮ್ಮದಿಯನ್ನು ಕದಡುವ ಅಪರಾಧಗಳನ್ನು ಮತ್ತು XV ನೇ ಅಧ್ಯಾಯದ ಅಡಿಯಲ್ಲಿ ಧರ್ಮಕ್ಕೆ ಸಂಬಂಧಪಟ್ಟ ಅಪರಾಧಗಳನ್ನು ಮಾಡುವುದರಲ್ಲಿ ತೊಡಗಿರುವ ಅಥವಾ ಅದಕ್ಕೆ ದುಷ್ಪ್ರೇರಿಸುವ ವ್ಯಕ್ತಿಗಳನ್ನು ಸ್ಥಾನಬದ್ಧತೆಯಲ್ಲಿಡಲು ಉಪಬಂಧ ಕಲ್ಪಿಸುವ ಸಲುವಾಗಿ ಕರ್ನಾಟಕ ಕಳ್ಳಭಟ್ಟಿವ್ಯಾಪಾರಿಗಳ, ಮಾದಕವಸ್ತು ಅಪರಾಧಿಗಳ, ಜೂಜುಕೋರರ, ಗೂಂಡಾಗಳ, ಅನೈತಿಕ ವ್ಯವಹಾರ ಅಪರಾಧಿಗಳ ಮತ್ತು ಕೊಳಚೆ ಪ್ರದೇಶಗಳನ್ನು ಕಬಳಿಸುವವರ ಅಪಾಯಕಾರಿ ಚಟುವಟಿಕೆಗಳ ಪ್ರತಿಬಂಧಕ ಅಧಿನಿಯಮ, 1985 ನ್ನು ತಿದ್ದುಪಡಿ ಮಾಡುವುದು ಅವಶ್ಯವೆಂದು ಪರಿಗಣಿಸಲಾಗಿದೆ.

ಆದ್ದರಿಂದ ಈ ವಿಧೇಯಕ.

(2000ನೇ ಸಾಲಿನ ವಿ.ಸ. ವಿಧೇಯಕ ಸಂ 24, ಕಡತ ಸಂ. ಸಂ.ವ್ಯ.ಶಾ.ಇ. 6 ಶಾಸನ 99ನ್ನು ನೋಡಿ)

# ಕರ್ನಾಟಕ ಕಳ್ಳಭಟ್ಟಿವ್ಯಾಪಾರಿಗಳ, ಮಾದಕವಸ್ತು ಅಪರಾಧಿಗಳ, ಜೂಜುಕೋರರ, ಗೂಂಡಾಗಳ, ಅನೈತಿಕ ವ್ಯವಹಾರ ಅಪರಾಧಿಗಳ ಮತ್ತು ಕೊಳಚೆ ಪ್ರದೇಶಗಳನ್ನು ಕಬಳಿಸುವವರ ಅಪಾಯಕಾರಿ ಚಟುವಟಿಕೆಗಳ ಪ್ರತಿಬಂಧಕ ಅಧಿನಿಯಮ, 1985

## ಪ್ರಕರಣಗಳ ಅನುಕ್ರಮಣಿಕೆ

**ಪ್ರಕರಣಗಳು**

# 1985ರ ಕರ್ನಾಟಕ ಅಧಿನಿಯಮ ಸಂ 12

(1985ರ ಏಪ್ರಿಲ್ ಇಪ್ಪತ್ತೊಂಬತ್ತನೇ ದಿನಾಂಕದಂದು ಕರ್ನಾಟಕ ರಾಜ್ಯಪತ್ರದ ವಿಶೇಷ ಸಂಚಿಕೆಯಲ್ಲಿ ಮೊದಲು ಪ್ರಕಟವಾಗಿದೆ)

## ಕರ್ನಾಟಕ ಕಳ್ಳಭಟ್ಟಿ ವ್ಯಾಪಾರಿಗಳ, ಔಷಧ ನಿಯಮಗಳನ್ನು ಉಲ್ಲಂಘಿಸುವವರ, ಜೂಜುಕೋರರ, ಗೂಂಡಾಗಳ, ಅನೈತಿಕ ವ್ಯವಹಾರ ಸಂಬಂಧಿ ಅಪರಾಧಿಗಳ ಮತ್ತು ಕೊಳೆಗೇರಿ ವಶಪಡಿಸಿಕೊಳ್ಳುವವರ ಅಪಾಯಕಾರಿ ಚಟುವಟಿಕೆಗಳ ಪ್ರತಿಬಂಧಕ ಅಧಿನಿಯಮ, 1985

**(1985ರ ಏಪ್ರಿಲ್ ಇಪ್ಪತ್ತೊಂಬತ್ತನೇ ದಿನಾಂಕದಂದು ರಾಷ್ಟ್ರಾಧ್ಯಕ್ಷರ ಅನುಮೋದನೆ ಪಡೆಯಲಾಗಿದೆ)**

**(1987ರ ಅಧಿನಿಯಮ 22 ಮತ್ತು 2001 ರ ಅಧಿನಿಯಮ 16ರ ಮೂಲಕ ತಿದ್ದುಪಡಿಯಾದಂತೆ)**

**ಸಾರ್ವಜನಿಕ ಸುವ್ಯವಸ್ಥೆಯ ನಿರ್ವಹಣೆಗೆ ಪ್ರತಿಕೂಲವಾಗಿರುವ ಕಳ್ಳಭಟ್ಟಿವ್ಯಾಪಾರಿಗಳ, ಮಾದಕ ವಸ್ತು ಅಪರಾಧಿಗಳ, ಜೂಜುಕೋರರ, ಗೂಂಡಾಗಳ, ಅನೈತಿಕ ವ್ಯವಹಾರ ಅಪರಾಧಿಗಳು ಮತ್ತು ಕೊಳಚೆ ಪ್ರದೇಶಗಳನ್ನು ಕಬಳಿಸುವವರ ಅಪಾಯಕಾರಿ ಚಟುವಟಿಕೆಗಳನ್ನು ಪ್ರತಿಬಂಧಿಸುವುದಕ್ಕಾಗಿ ಅವರನ್ನು ಪ್ರತಿಬಂಧಕ ಸ್ಥಾನಬದ್ಧತೆಯಲ್ಲಿಡಲು ಉಪಬಂಧ ಕಲ್ಪಿಸುವ ಒಂದು ಅಧಿನಿಯಮ.**

ಕಳ್ಳಭಟ್ಟಿ ವ್ಯಾಪಾರಿಗಳ, ಮಾದಕವಸ್ತು ಅಪರಾಧಿಗಳ, ಜೂಜುಕೋರರ, ಗೂಂಡಾಗಳ, ಅನೈತಿಕ ವ್ಯವಹಾರ ಅಪರಾಧಿಗಳ ಮತ್ತು ಕೊಳಚೆ ಪ್ರದೇಶಗಳನ್ನು ಕಬಳಿಸುವವರೆಂದು ಕರೆಯಲಾಗುವ ಕೆಲವು ವ್ಯಕ್ತಿಗಳ ಅಪಾಯಕಾರಿ ಚಟುವಟಿಕೆಗಳಿಂದಾಗಿ ಆಗಾಗ್ಗೆ ಸಾರ್ವಜನಿಕ ಸುವ್ಯವಸ್ಥೆಯ ಮೇಲೆ ಪ್ರತಿಕೂಲ ಪರಿಣಾಮ ಉಂಟಾಗುತ್ತಿರುವುದರಿಂದ;

ಇದು, ಭಾರತ ಗಣರಾಜ್ಯದ ಇಪ್ಪತ್ತಾರನೇ ವರ್ಷದಲ್ಲಿ ಕರ್ನಾಟಕ ರಾಜ್ಯ ವಿಧಾನ ಮಂಡಲದಿಂದ ಈ ಮುಂದಿನಂತೆ ಅಧಿನಿಯಮಿತವಾಗಲಿ:

**1. ಚಿಕ್ಕ ಹೆಸರು ಮತ್ತು ಪ್ರಾರಂಭ:-** (1) ಈ ಆಧಿನಿಯಮವನ್ನು ಕರ್ನಾಟಕ ಕಳ್ಳಭಟ್ಟಿ ವ್ಯಾಪಾರಿಗಳ, ಮಾದಕವಸ್ತು ಅಪರಾಧಿಗಳ, ಜೂಜುಕೋರರ, ಗೂಂಡಾಗಳ, ಅನೈತಿಕ ವ್ಯವಹಾರ ಅಪರಾಧಿಗಳ ಮತ್ತು ಕೊಳಚೆ ಪ್ರದೇಶಗಳನ್ನು ಕಬಳಿಸುವವರ ಅಪಾಯಕಾರಿ ಚಟುವಟಿಕೆಗಳ ಪ್ರತಿಬಂಧಕ ಅಧಿನಿಯಮ, 1985 ಎಂದು ಕರೆಯತಕ್ಕದ್ದು.

(2) ಇದು, 1984ರ ಡಿಸೆಂಬರ್ ಹದಿನೈದನೇ ದಿನಾಂಕದಂದು ಜಾರಿಯಲ್ಲಿ ಬಂದಿರುವುದಾಗಿ ಭಾವಿಸತಕ್ಕದ್ದು.

**2. ಪರಿಭಾಷೆಗಳು:-** ಈ ಅಧಿನಿಯಮದಲ್ಲಿ ಸಂದರ್ಭವು ಅನ್ಯಥಾ ಅಗತ್ಯಪಡಿಸಿದ ಹೊರತು,-

(ಎ) "ಸಾರ್ವಜನಿಕ ಸುವ್ಯವಸ್ಥೆಯ ನಿರ್ವಹಣೆಗೆ ಪ್ರತಿಕೂಲವಾದ ಯಾವುದೇ ರೀತಿಯಲ್ಲಿ ಕಾರ್ಯ ನಡೆಸುವುದು" ಎಂದರೆ,-

(i) ಒಬ್ಬ ಕಳ್ಳಭಟ್ಟಿ ವ್ಯಾಪಾರಿಗಳ ಸಂದರ್ಭದಲ್ಲಿ, ಒಬ್ಬ ಕಳ್ಳಭಟ್ಟಿ ವ್ಯಾಪಾರಿಯಾಗಿ, ಸಾರ್ವಜನಿಕ ಸುವ್ಯವಸ್ಥೆಯ ನಿರ್ವಹಣೆಗೆ ಪ್ರತಿಕೂಲ ಪರಿಣಾಮವನ್ನು ಉಂಟು ಮಾಡುವ ಅಥವಾ ಪ್ರತಿಕೂಲ ಪರಿಣಾಮ ಉಂಟು ಮಾಡುವ ಸಂಭವವಿರುವ ಯಾವುವೇ ಚಟುವಟಿಕೆಗಳಲ್ಲಿ ತೊಡಗಿರುವುದು ಅಥವಾ ಹಾಗೆ ತೊಡಗಲು ಸಿದ್ಧತೆಗಳನ್ನು ಮಾಡಿಕೊಳ್ಳುತ್ತಿರುವುದು;

(ii) ಒಬ್ಬ ಮಾದಕ ವಸ್ತು ಅಪರಾಧಿಯ ಸಂದರ್ಭದಲ್ಲಿ , ಸಾರ್ವಜನಿಕ ಸುವ್ಯವಸ್ಥೆಯ ನಿರ್ವಹಣೆಗೆ ಪ್ರತಿಕೂಲ ಪರಿಣಾಮ ಉಂಟು ಮಾಡುವ ಅಥವಾ ಹಾಗೆ ಪ್ರತಿಕೂಲ ಪರಿಣಾಮ ಉಂಟು ಮಾಡುವ ಸಂಭವವಿರುವ ಒಬ್ಬ ಮಾದಕವಸ್ತು ಅಪರಾಧಿಯಾಗಿ ಯಾವುವೇ ಚಟುವಟಿಕೆಗಳಲ್ಲಿ ತೊಡಗಿರುವುದು ಅಥವಾ ಹಾಗೆ ತೊಡಗಲು ಸಿದ್ಧತೆ ಮಾಡಿಕೊಳ್ಳುವುದು;

(iii) ಒಬ್ಬ ಜೂಜುಕೋರನ ಸಂದರ್ಭದಲ್ಲಿ ಜೂಜುಕೋರನಾಗಿ, ಸಾರ್ವಜನಿಕ ಸುವ್ಯವಸ್ಥೆಯ ನಿರ್ವಹಣೆಗೆ ಪ್ರತಿಕೂಲ ಪರಿಣಾಮ ಉಂಟು ಮಾಡುವ ಅಥವಾ ಪ್ರತಿಕೂಲ ಪರಿಣಾಮ ಉಂಟು ಮಾಡುವ ಸಂಭವವಿರುವ ಯಾವುವೇ ಚಟುವಟಿಕೆಗಳಲ್ಲಿ ತೊಡಗಿರುವುದು ಅಥವಾ ಹಾಗೆ ತೊಡಗಲು ಸಿದ್ಧತೆ ಮಾಡಿಕೊಳ್ಳುವುದು;

(iv) ಒಬ್ಬ ಗೂಂಡನ ಸಂದರ್ಭದಲ್ಲಿ , ಗೂಂಡಾ ಆಗಿ, ಸಾರ್ವಜನಿಕ ಸುವ್ಯವಸ್ಥೆಯ ನಿರ್ವಹಣೆಗೆ ಪ್ರತಿಕೂಲ ಪರಿಣಾಮ ಉಂಟು ಮಾಡುವ ಅಥವಾ ಪ್ರತಿಕೂಲ ಪರಿಣಾಮ ಉಂಟುಮಾಡುವ ಸಂಭವವಿರುವ ಚಟುವಟಿಕೆಗಳಲ್ಲಿ ತೊಡಗುವುದು ಅಥವಾ ಹಾಗೆ ತೊಡಗಲು ಸಿದ್ಧತೆ ಮಾಡಿಕೊಳ್ಳುವುದು ;

(v) ಒಬ್ಬ ಅನೈತಿಕ ವ್ಯವಹಾರ ಸಂಬಂಧಿ ಅಪರಾಧಿಯ ಸಂದರ್ಭದಲ್ಲಿ , ಅನೈತಿಕ ವ್ಯವಹಾರ ಸಂಬಂಧಿ ಅಪರಾಧಿಯಾಗಿ ಸಾರ್ವಜನಿಕ ಸುವ್ಯವಸ್ಥೆಯ ನಿರ್ವಹಣೆಗೆ ಪ್ರತಿಕೂಲ ಪರಿಣಾಮವುಂಟು ಮಾಡುವ ಅಥವಾ ಪ್ರತಿಕೂಲ ಪರಿಣಾಮ ಉಂಟು ಮಾಡುವ ಸಂಭವವಿರುವ ಚಟುವಟಿಕೆಗಳಲ್ಲಿ ತೊಡಗುವುದು ಅಥವಾ ಹಾಗೆ ತೊಡಗಲು ಸಿದ್ಧತೆ ಮಾಡಿಕೊಳ್ಳುವುದು;

(vi) ಕೊಳಚೆ ಪ್ರದೇಶಗಳನ್ನು ಕಬಳಿಸುವವನ ಸಂದರ್ಭದಲ್ಲಿ, ಕೊಳಚೆ ಪ್ರದೇಶಗಳನ್ನು ಕಬಳಿಸುವವನಾಗಿ ಸಾರ್ವಜನಿಕ ಸುವ್ಯವಸ್ಥೆಯ ನಿರ್ವಹಣೆಗೆ ಪ್ರತಿಕೂಲ ಪರಿಣಾಮ ಉಂಟು ಮಾಡುವ ಅಥವಾ ಪ್ರತಿಕೂಲ ಪರಿಣಾಮವುಂಟು ಮಾಡುವ ಸಂಭವವಿರುವ ಯಾವುವೇ ಚಟುವಟಿಕೆಗಳಲ್ಲಿ ತೊಡಗಿರುವುದು ಅಥವಾ ತೊಡಗಲು ಸಿದ್ಧತೆ ಮಾಡಿಕೊಳ್ಳುವುದು.

**ವಿವರಣೆ:-** ಈ ಖಂಡದ ಉದ್ದೇಶಕ್ಕಾಗಿ, ಈ ಖಂಡದಲ್ಲಿ ಉಲ್ಲೇಖಿತವಾದ, ಯಾರೇ ವ್ಯಕ್ತಿಗಳ ಯಾವುವೇ ಚಟುವಟಿಕೆಗಳು ಪ್ರತ್ಯಕ್ಷ ಅಥವಾ ಪರೋಕ್ಷವಾಗಿ ಸಾರ್ವಜನಿಕರಿಗೆ ಅಥವಾ ಅವರ ಯಾವುದೇ ಒಂದು ವರ್ಗಕ್ಕೆ ಯಾವುದೇ ತೊಂದರೆಯನ್ನು, ಅಪಾಯವನ್ನು ಅಥವಾ ಭೀತಿಯನ್ನು ಅಥವಾ ಅಭದ್ರತೆಯ ಭಾವನೆಯನ್ನು ಅಥವಾ ಜೀವಕ್ಕೆ ಅಥವಾ ಸಾರ್ವಜನಿಕರ ಆರೋಗ್ಯಕ್ಕೆ ತೀವ್ರ ಸ್ವರೂಪದ ಅಥವಾ ವ್ಯಾಪಕವಾದ ಅಪಾಯವನ್ನು ಉಂಟು ಮಾಡುತ್ತಿದ್ದರೆ ಅಥವಾ ಉಂಟು ಮಾಡುವ ಸಾಧ್ಯತೆ ಇದ್ದರೆ, ಅದು, ಇತರ ವಿಷಯಗಳ

ಜೊತೆಗೆ, ಸಾರ್ವಜನಿಕ ಸುವ್ಯವಸ್ಥೆಗೆ ಪ್ರತಿಕೂಲ ಪರಿಣಾಮ ಉಂಟುಮಾಡಿದೆಯೆಂದು ಭಾವಿಸತಕ್ಕದ್ದು ಅಥವಾ ಪ್ರತಿಕೂಲ ಪರಿಣಾಮವನ್ನು ಉಂಟು ಮಾಡುವ ಸಾಧ್ಯತೆಯಿದೆಯೆಂದು ಭಾವಿಸತಕ್ಕದ್ದು.

(ಬಿ) "ಕಳ್ಳಭಟ್ಟಿವ್ಯಾಪಾರಿ" ಎಂದರೆ, ಕರ್ನಾಟಕ ಅಬ್ಕಾರಿ ಅಧಿನಿಯಮ, 1965ರ (1966ರ ಕರ್ನಾಟಕ ಅಧಿನಿಯಮ 21) ಯಾವುವೇ ಉಪಬಂಧಗಳನ್ನು ಮತ್ತು ಅದರ ಅಡಿಯಲ್ಲಿ ಮಾಡಿದ ನಿಯಮಗಳು, ಅಧಿಸೂಚನೆಗಳು ಮತ್ತು ಆದೇಶಗಳನ್ನು ಉಲ್ಲಂಘಿಸಿ ಅಥವಾ ತತ್ಕಾಲದಲ್ಲಿ ಜಾರಿಯಲ್ಲಿರುವ ಯಾವುದೇ ಇತರ ಕಾನೂನನ್ನು ಉಲ್ಲಂಘಿಸಿ, ಯಾವುದೇ ಮದ್ಯ, ಮಾದಕ ಔಷಧ ಅಥವಾ ಇತರ ಮಾದಕ ದ್ರವ್ಯಗಳನ್ನು ಭಟ್ಟಿ ಇಳಿಸುವ, ತಯಾರಿಸುವ, ದಾಸ್ತಾನು ಇಡುವ, ಸಾಗಿಸುವ, ಆಮದು ಮಾಡುವ, ರಫ್ತು ಮಾಡುವ, ಮಾರಾಟ ಮಾಡುವ ಅಥವಾ ವಿತರಣೆ ಮಾಡುವ ಅಥವಾ ಮೇಲೆ ಹೇಳಲಾದ ಯಾವುವೇ ಕೃತ್ಯಗಳ ಸಂಬಂಧವಾಗಿ ಅಥವಾ ಅದಕ್ಕೆ ಬೆಂಬಲವಾಗಿ, ತಿಳಿದೂ ತಿಳಿದೂ ಬೇರೊಬ್ಬ ವ್ಯಕ್ತಿಯಿಂದ ಅಥವಾ ವ್ಯಕ್ತಿಯ ಮೂಲಕ ವೆಚ್ಚ ಮಾಡಿಸುವ ಅಥವಾ ಹಣವನ್ನು ತೊಡಗಿಸುವ ಅಥವಾ ಯಾವುದೇ ಪ್ರಾಣಿ, ವಾಹನ, ಹಡಗು ಅಥವಾ ಇತರ ಸಾಗಣೆ ಸೌಲಭ್ಯವನ್ನು ಅಥವಾ ಯಾವುದೇ ಹಡಗನ್ನು ಅಥವಾ ಇತರ ಯಾವುದೇ ಹಡಗನ್ನು ಅಥವಾ ಇತರೆ ಯಾವುದೇ ವಾಹನವನ್ನು ಯಾವುದೇ ಪಾತ್ರೆಯನ್ನು ಸರಬರಾಜು ಮಾಡುವ ಅಥವಾ ಅಂಥ ಯಾವುದೇ ಕೃತ್ಯವನ್ನು ಮಾಡಲು ಇತರ ಯಾವುದೇ ರೀತಿಯಲ್ಲಿ ನೆರವಾಗುವ ಯಾವನೇ ಒಬ್ಬ ವ್ಯಕ್ತಿ ಅಥವಾ ಅಂಥ ಯಾವುದೇ ಕೃತ್ಯ ಮಾಡಲು ಯಾವುದೇ ರೀತಿಯಲ್ಲಿ ದುಷ್ಪ್ರೇರಿಸುವ ಯಾವನೇ ಒಬ್ಬ ವ್ಯಕ್ತಿ ;

(ಸಿ) "ಸ್ಥಾನಬದ್ಧತಾ ಆದೇಶ" ಎಂದರೆ, 3ನೇ ಪ್ರಕರಣದ ಡಿಯಲ್ಲಿ ಹೊರಡಿಸಲಾದ ಆದೇಶ;

(ಡಿ) "ಸ್ಥಾನಬದ್ಧತೆಯಲ್ಲಿರುವವನು" ಎಂದರೆ, ಸ್ಥಾನಬದ್ಧತಾ ಆದೇಶದ ಮೇರೆಗೆ ಸ್ಥಾನಬದ್ಧತೆಯಲ್ಲಿಡಲಾದ ಒಬ್ಬ ವ್ಯಕ್ತಿ;

(ಇ) "ಮಾದಕವಸ್ತು ಅಪರಾಧಿ" ಎಂದರೆ, ಔಷಧ ಮತ್ತು ಪ್ರಸಾಧನ ಸಾಮಗ್ರಿಗಳ ಅಧಿನಿಯಮ, 1940ರ (1940ರ ಕೇಂದ್ರಾಧಿನಿಯಮ XXIII) ಅಥವಾ ಅಪಾಯಕಾರಿ ಔಷಧಗಳ ಅಧಿನಿಯಮ, 1930ರ (1930ರ ಕೇಂದ್ರಾಧಿನಿಯಮ II) ಯಾವುವೇ ಉಪಬಂಧಗಳನ್ನು ಮತ್ತು ಇವೆರಡೂ ಅಧಿನಿಯಮಗಳ ಅಡಿಯಲ್ಲಿ ರಚಿಸಲಾದ ಯಾವುವೇ ನಿಯಮಗಳು, ಅಧಿಸೂಚನೆಗಳು ಮತ್ತು ಆದೇಶಗಳನ್ನು ಉಲ್ಲಂಘಿಸಿ ಅಥವಾ ತತ್ಕಾಲದಲ್ಲಿ ಜಾರಿಯಲ್ಲಿರುವ ಇತರ ಯಾವುದೇ ಕಾನೂನನ್ನು ಉಲ್ಲಂಘಿಸಿ, ಯಾವುದೇ ಮಾದಕವಸ್ತುವನ್ನು ತಯಾರಿಸುವ, ದಾಸ್ತಾನು ಇಡುವ, ಆಮದು ಮಾಡಿಕೊಳ್ಳುವ, ರಫ್ತು ಮಾಡುವ, ಮಾರಾಟ ಮಾಡುವ ಅಥವಾ ವಿತರಣೆ ಮಾಡುವ ಅಥವಾ ಯಾವುದೇ ಮಾದಕ ಔಷಧ ಗಿಡವನ್ನು ಬೆಳೆಸುವ ಅಥವಾ ಇತರ ಏನನ್ನಾದರೂ ಮಾಡುವ ಅಥವಾ ಮೇಲೆ ಹೇಳಲಾದ ಯಾವುವೇ ಏನಾನ್ನಾದರೂ ಮಾಡುವ ಸಂಬಂಧವಾಗಿ ಅಥವಾ ಅದಕ್ಕೆ ಬೆಂಬಲವಾಗಿ, ಗೊತ್ತಿದ್ದೂ ಬೇರೊಬ್ಬ ವ್ಯಕ್ತಿಯಿಂದ ಅಥವಾ ವ್ಯಕ್ತಿಯ ಮೂಲಕ ವೆಚ್ಚ ಮಾಡಿಸುವ ಅಥವಾ ಹಣವನ್ನು ತೊಡಗಿಸುವ ಅಥವಾ ಅಂಥ ಯಾವುದನ್ನಾದರೂ ಮಾಡಲು ಇತರ ಯಾವುದೇ ರೀತಿಯಲ್ಲಿ ದುಷ್ಪ್ರೇರಿಸುವ ಯಾವನೇ ಒಬ್ಬ ವ್ಯಕ್ತಿ;

(ಎಫ್) "ಜೂಜುಕೋರ" ಎಂದರೆ, ಕರ್ನಾಟಕ ಪೊಲೀಸು ಅಧಿನಿಯಮ, 1963ರ (1964ರ ಕರ್ನಾಟಕ ಅಧಿನಿಯಮ 4) VII ನೇ ಅಧ್ಯಾಯದ ಅಡಿಯಲ್ಲಿ ಶಿಕ್ಷಾರ್ಹವಾದ ಮಟ್ಕಾಗೆ ಸಂಬಂಧಪಟ್ಟ ಮತ್ತು ಸದರಿ ಅಧ್ಯಾಯದ ಅಡಿಯಲ್ಲಿ ಶಿಕ್ಷಾರ್ಹವಾದ ಜೂಜು ಅಪರಾಧವೂ ಸೇರಿದಂತೆ, ಯಾವುದೇ ಅಪರಾಧವನ್ನು ಮಾಡುವ ಅಥವಾ ಮಾಡುವಂತೆ ದುಷ್ಪ್ರೇರಿಸುವ ಯಾವನೇ ಒಬ್ಬ ವ್ಯಕ್ತಿ;

(ಜಿ) "ಗೂಂಡಾ" ಎಂದರೆ, ಭಾರತ ದಂಡ ಸಂಹಿತೆಯ (1860ರ ಕೇಂದ್ರ ಅಧಿನಿಯಮ XLV) [1][VIII ನೇ ಅಧ್ಯಾಯ, XVನೇ ಅಧ್ಯಾಯ, XVIನೇ ಅಧ್ಯಾಯ][1], XVII ನೇ ಅಧ್ಯಾಯ ಅಥವಾ XXII ನೇ ಅಧ್ಯಾಯಗಳ ಅಡಿಯಲ್ಲಿ ಶಿಕ್ಷಾರ್ಹವಾದ ಅಪರಾಧಗಳನ್ನು ಸ್ವತ: ತಾನೇ ಅಥವಾ ಯಾವುದೇ ಗುಂಪಿನ ಸದಸ್ಯನಾಗಿ ಅಥವಾ ಮುಖ್ಯಸ್ಥನಾಗಿ ಮಾಡುವ ಅಥವಾ ಮಾಡಲು ಯತ್ನಿಸುವ ಅಥವಾ ಮಾಡುವಂತೆ ದುಷ್ಪ್ರೇರಿಸುವ ಯಾವನೇ ಒಬ್ಬ ವ್ಯಕ್ತಿ;

1. 2001ರ ಅಧಿನಿಯಮ 16ರ ಮೂಲಕ 1.5.2001ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.

(ಹೆಚ್) "ಅನೈತಿಕ ವ್ಯವಹಾರ ಅಪರಾಧಿ " ಎಂದರೆ, ಮಹಿಳೆಯರ ಮತ್ತು ಬಾಲಕಿಯರ ಅನೈತಿಕ ವ್ಯವಹಾರ ದಮನ ಅಧಿನಿಯಮ, 1956ರ (1956ರ ಕೇಂದ್ರಾಧಿನಿಯಮ 104) ಅಡಿಯಲ್ಲಿ ಯಾವುದೇ ಅಪರಾಧವನ್ನು ಮಾಡುವ ಅಥವಾ ಮಾಡುವಂತೆ ದುಷ್ಪ್ರೇರಿಸುವ ಒಬ್ಬ ವ್ಯಕ್ತಿ;

(ಐ) "ಕೊಳಚೆ ಪ್ರದೇಶವನ್ನು ಕಬಳಿಸುವವನು" ಎಂದರೆ, ಯಾವುದೇ ಜಮೀನನ್ನು (ಸರ್ಕಾರಕ್ಕೆ, ಸ್ಥಳೀಯ ಪ್ರಾಧಿಕಾರಕ್ಕೆ ಅಥವಾ ಯಾವೊಬ್ಬ ವ್ಯಕ್ತಿಗೆ ಸೇರಿದುದಾಗಿರಲಿ) ಅಕ್ರಮವಾಗಿ ಸ್ವಾಧೀನಪಡಿಸಿಕೊಳ್ಳುವ ಅಥವಾ ಅಂಥ ಜಮೀನಿನ ಸಂಬಂಧದಲ್ಲಿ ಅಕ್ರಮವಾದ ಗುತ್ತಿಗೆ ಅಥವಾ ಅನುಮತಿ ಒಪ್ಪಂದ ಅಥವಾ ಲೈಸೆನ್ಸು ಒಪ್ಪಂದ ಅಥವಾ ಇತರ ಯಾವುದೇ ಒಪ್ಪಂದವನ್ನು ಮಾಡಿಕೊಳ್ಳುವ ಅಥವಾ ಸೃಜಿಸುವ ಅಥವಾ ಮಾರಾಟಕ್ಕಾಗಿ ಅಥವಾ ಬಾಡಿಗೆಗಾಗಿ ಅದರ ಮೇಲೆ ಅನಧಿಕೃತವಾಗಿ ಕಟ್ಟಡಗಳನ್ನು ನಿರ್ಮಿಸುವ ಅಥವಾ ಅನಧಿಕೃತ ಕಟ್ಟಡಗಳ ನಿರ್ಮಾಣಕ್ಕಾಗಿ ಅಥವಾ ಬಳಕೆ ಮತ್ತು ಅನುಭೋಗಕ್ಕಾಗಿ ಬಾಡಿಗೆಗೆ ಅಥವಾ ಅನುಮತಿ ಮತ್ತು ಲೈಸೆನ್ಸ್ ನೀಡುವ ಆಧಾರದ ಮೇಲೆ ಅಂಥ ಜಮೀನನ್ನು ನೀಡುವ ಅಥವಾ ಅಂಥ ಭೂಮಿಗಳ ಅಕ್ರಮ ಸ್ವಾಧೀನತೆ ತೆಗೆದುಕೊಳ್ಳುವುದಕ್ಕಾಗಿ ಅಥವಾ ಅದರ ಮೇಲೆ ಅನಧಿಕೃತ ಕಟ್ಟಡಗಳನ್ನು ನಿರ್ಮಿಸುವುದಕ್ಕಾಗಿ ಯಾರೇ ವ್ಯಕ್ತಿಗೆ ಗೊತ್ತಿದ್ದೂ, ಆರ್ಥಿಕ ನೆರವು ನೀಡುವ ಅಥವಾ ಅಂಥ ಜಮೀನುಗಳ ಯಾರೇ ಅನುಭವದಾರನಿಂದ ಅಪರಾಧಿಕ ಭಯೋತ್ಪಾದನೆಯ ಮೂಲಕ ಬಾಡಿಗೆ, ಪರಿಹಾರ ಅಥವಾ ಇತರ ವೆಚ್ಚಗಳನ್ನು ವಸೂಲು ಮಾಡುವ ಅಥವಾ ವಸೂಲು ಮಾಡಲು ಪ್ರಯತ್ನಿಸುವ ಅಥವಾ ಯಾವುದೇ ಕಾನೂನುಬದ್ಧ ಕಾರ್ಯ ವಿಧಾನಗಳನ್ನು ಅನುಸರಿಸದೆ ಬಲಾತ್ಕಾರವಾಗಿ ಅಂಥ ಯಾರೇ ಅನುಭವದಾರನನ್ನು ಹೊರದೂಡುವ ಅಥವಾ ಹೊರದೂಡಲು ಪ್ರಯತ್ನಿಸುವ ಅಥವಾ ಮೇಲೆ ಹೇಳಲಾದಂಥ ಯಾವುದೇ ಕೃತ್ಯವನ್ನು ಮಾಡುವಂತೆ ಯಾವುದೇ ರೀತಿಯಲ್ಲಿ ದುಷ್ಪ್ರೇರಿಸುವ ಒಬ್ಬ ವ್ಯಕ್ತಿ;

(ಜೆ) "ಅನಧಿಕೃತ ರಚನೆ" ಎಂದರೆ, ತತ್ಕಾಲದಲ್ಲಿ ಜಾರಿಯಲ್ಲಿರುವ ಯಾವುದೇ ಕಾನೂನಿನ ಅಡಿಯಲ್ಲಿ ಅಥವಾ ಸಂಬಂಧಪಟ್ಟ ಪ್ರದೇಶದಲ್ಲಿ ಜಾರಿಯಲ್ಲಿರುವ ಯಾವುದೇ ಕಾನೂನಿಗನುಸಾರವಾಗಿ ಅಲ್ಲದೆ, ಸಮುಚಿತ ಪ್ರಾಧಿಕಾರದ ಲಿಖಿತ ರೂಪದ ವ್ಯಕ್ತ ಅನುಮತಿಯಿಲ್ಲದೆ ನಿರ್ಮಿಸಿರುವ ಯಾವುದೇ ರಚನೆ.

**3. ಕೆಲವು ವ್ಯಕ್ತಿಗಳನ್ನು ಸ್ಥಾನಬದ್ಧತೆಯಲ್ಲಿಡಲು ಆದೇಶಗಳನ್ನು ಹೊರಡಿಸುವ ಅಧಿಕಾರ:-** (1) ಕಳ್ಳಭಟ್ಟಿವ್ಯಾಪಾರಿಗಳು, ಮಾದಕವಸ್ತು ಅಪರಾಧಿಗಳು, ಜೂಜುಕೋರರು, ಗೂಂಡಾಗಳು, ಅನೈತಿಕ ವ್ಯವಹಾರ ಅಪರಾಧಿಗಳು ಅಥವಾ ಕೊಳಚೆ ಪ್ರದೇಶ ಕಬಳಿಸುವವರು ಸಾರ್ವಜನಿಕ ಸುವ್ಯವಸ್ಥೆಯ ಪ್ರತಿಕೂಲವಾದ ಯಾವುದೇ ರೀತಿಯಲ್ಲಿ ವರ್ತಿಸುವುದನ್ನು ತಡೆಯುವ ಉದ್ದೇಶದಿಂದ ಅಂಥ ವ್ಯಕ್ತಿಗಳನ್ನು ಸ್ಥಾನಬದ್ಧತೆಯಲ್ಲಿಡುವುದು ಅವಶ್ಯಕವೆಂದು ರಾಜ್ಯ ಸರ್ಕಾರಕ್ಕೆ ಮನದಟ್ಟಾದರೆ ಅದು ಹಾಗೆ ಮಾಡಲು ನಿರ್ದೇಶಿಸುವ ಒಂದು ಆದೇಶವನ್ನು ಮಾಡಬಹುದು.

(2) ಒಬ್ಬ ಜಿಲ್ಲಾ ಮ್ಯಾಜಿಸ್ಟ್ರೇಟನ ಅಥವಾ ಒಬ್ಬ ಪೊಲೀಸ್ ಆಯುಕ್ತರ ಅಧಿಕಾರ ವ್ಯಾಪ್ತಿಯ ಯಾವುದೇ ಪ್ರದೇಶದ ಸ್ಥಳೀಯ ಪರಿಮಿತಿಯೊಳಗೆ ಉದ್ಭವಿಸಿರುವ ಅಥವಾ ಉದ್ಭವಿಸುವ ಸಂಭವವಿರುವ ಸನ್ನಿವೇಶಗಳನ್ನು ದೃಷ್ಟಿಯಲ್ಲಿರಿಸಿಕೊಂಡು, ಆದೇಶದಲ್ಲಿ ನಿರ್ದಿಷ್ಟಪಡಿಸಬಹುದಾದಂಥ ಅವಧಿಯಲ್ಲಿ, ಅಂಥ ಮ್ಯಾಜಿಸ್ಟ್ರೇಟನು ಅಥವಾ ಪೊಲೀಸ್ ಆಯುಕ್ತನು ಕೂಡ (1)ನೇ ಉಪ ಪ್ರಕರಣದಲ್ಲಿ ಉಪಬಂಧಿಸಲಾದ ಅಧಿಕಾರಗಳನ್ನು ಚಲಾಯಿಸಬಹುದೆಂದು ಲಿಖಿತ ಆದೇಶದ ಮೂಲಕ ಅಗತ್ಯವೆಂದು ಸರ್ಕಾರಕ್ಕೆ ಮನದಟ್ಟಾದರೆ, ಅದು ಹಾಗೆ ಮಾಡಬಹುದು:

ಪರಂತು, ಈ ಉಪಪ್ರಕರಣದ ಅಡಿಯಲ್ಲಿ ರಾಜ್ಯ ಸರ್ಕಾರವು ಹೊರಡಿಸಿದ ಆದೇಶದಲ್ಲಿ ನಿರ್ದಿಷ್ಟಪಡಿಸಿದ ಅವಧಿಯು ಮೊದಲನೇ ಬಾರಿಗೆ ಮೂರು ತಿಂಗಳನ್ನು ಮೀರತಕ್ಕದ್ದಲ್ಲ. ಆದರೆ, ರಾಜ್ಯ ಸರ್ಕಾರವು ಕಾಲಕಾಲಕ್ಕೆ ಅಂಥ ಅವಧಿಯನ್ನು ಯಾವುದೇ ಒಂದು ಬಾರಿಗೆ ಮೂರು ತಿಂಗಳನ್ನು ಮೀರದ ಅವಧಿಗೆ ವಿಸ್ತರಿಸಿ ಅಂಥ ಆದೇಶವನ್ನು ತಿದ್ದುಪಡಿ ಮಾಡುವುದು ಅವಶ್ಯವೆಂದು ಪರಿಗಣಿಸಿದರೆ, ಅದು ಹಾಗೆ ಮಾಡಬಹುದು.

(3) (2)ನೇ ಉಪಪ್ರಕರಣದಲ್ಲಿ ಹೇಳಲಾದ ಒಬ್ಬ ಅಧಿಕಾರಿಯು ಈ ಪ್ರಕರಣದ ಅಡಿಯಲ್ಲಿ ಯಾವುದೇ ಆದೇಶವನ್ನು ಹೊರಡಿಸಿದಾಗ ಯಾವ ಕಾರಣಗಳ ಆಧಾರದ ಮೇಲೆ ಈ ಆದೇಶವನ್ನು ಹೊರಡಿಸಲಾಯಿತೋ ಅವುಗಳನ್ನು ಮತ್ತು ಆ ವಿಷಯಕ್ಕೆ ಸಂಬಂಧಿಸಿದುದೆಂದು ತಾನು ಅಭಿಪ್ರಾಯಪಡುವಂಥ ಇತರ ವಿವರಗಳನ್ನು ಅವನು ಕೂಡಲೇ ರಾಜ್ಯ ಸರ್ಕಾರಕ್ಕೆ ತಿಳಿಸತಕ್ಕದ್ದು ಮತ್ತು ಈ ಮಧ್ಯೆ ರಾಜ್ಯ ಸರ್ಕಾರವು ಅನುಮೋದಿಸಿದ ಹೊರತು, ಹಾಗೆ ಹೊರಡಿಸಿದ ಯಾವುದೇ ಆದೇಶವು ಹನ್ನೆರಡು ದಿನಗಳಿಗಿಂತ ಹೆಚ್ಚಿನ ಅವಧಿಯವರೆಗೆ ಜಾರಿಯಲ್ಲಿರತಕ್ಕದ್ದಲ್ಲ.

**4. ಸ್ಥಾಬದ್ಧವಾಗಿ ಆದೇಶಗಳನ್ನು ಜಾರಿ ಮಾಡುವುದು:-** ದಂಡ ಪ್ರಕ್ರಿಯಾ ಸಂಹಿತೆ, 1973ರ (1974ರ ಕೇಂದ್ರ ಅಧಿನಿಯಮ 2) ಅಡಿಯಲ್ಲಿ ದಸ್ತಗಿರಿಯ ವಾರಂಟುಗಳನ್ನು ಜಾರಿಮಾಡಲು ಉಪಬಂಧಿಸಿರುವ ರೀತಿಯಲ್ಲಿ ರಾಜ್ಯದಲ್ಲಿನ ಯಾವುದೇ ಸ್ಥಳದಲ್ಲಿ ಒಂದು ಸ್ಥಾನಬದ್ಧತಾ ಆದೇಶವನ್ನು ಜಾರಿಗೊಳಿಸಬಹುದು.

**5. ಸ್ಥಾನಬದ್ಧತೆಯ ಸ್ಥಳ ಮತ್ತು ಷರತ್ತುಗಳನ್ನು ವಿನಿಯಮಿಸುವ ಅಧಿಕಾರ:-** ಯಾರ ಸಂಬಂಧವಾಗಿ ಒಂದು ಸ್ಥಾನಬದ್ಧತಾ ಆದೇಶವನ್ನು ಹೊರಡಿಸಲಾಗಿದೆಯೋ ಆ ಪ್ರತಿಯೊಬ್ಬ ವ್ಯಕ್ತಿಯು,-

(ಎ) ನಿರ್ವಹಣೆ, ಶಿಸ್ತು ಮತ್ತು ಶಿಸ್ತು ಉಲ್ಲಂಘನೆಗೆ ಶಿಕ್ಷೆ ಇವುಗಳಿಗೆ ಸಂಬಂಧಪಟ್ಟ ಷರತ್ತುಗಳೂ ಸೇರಿದಂತೆ, ರಾಜ್ಯ ಸರ್ಕಾರವು ಸಾಮಾನ್ಯ ಅಥವಾ ವಿಶೇಷ ಆದೇಶದ ಮೂಲಕ ನಿರ್ದಿಷ್ಟಪಡಿಸಬಹುದಾದಂಥ ಸ್ಥಳದಲ್ಲಿ ಮತ್ತು ಅಂಥ ಷರತ್ತುಗಳಿಗೆ ಒಳಪಟ್ಟು ಸ್ಥಾನಬದ್ಧತೆಯಲ್ಲಿರಲು; ಮತ್ತು

(ಬಿ) ರಾಜ್ಯ ಸರ್ಕಾರದ ಆದೇಶದ ಮೂಲಕ ರಾಜ್ಯದ್ಯೊಳಗೆ ಸ್ಥಾನಬದ್ಧತೆಯ ಒಂದು ಸ್ಥಳದಿಂದ ರಾಜ್ಯದಲ್ಲಿನ ಸ್ಥಾನಬದ್ಧತೆಯ ಮತ್ತೊಂದು ಸ್ಥಳಕ್ಕೆ ಒಯ್ಯಲ್ಪಡಲು

--ಬದ್ಧನಾಗಿರತಕ್ಕದ್ದು.

**6. ಕೆಲವು ಕಾರಣಗಳ ಮೇಲೆ ಸ್ಥಾನಬದ್ಧವಾಗಿ ಆದೇಶವು ಅಮಾನ್ಯವಾಗದಿರುವುದು ಅಥವಾ ಜಾರಿಯಾಗದಿರುವುದು:-** ಯಾವುದೇ ಸ್ಥಾನಬದ್ಧತಾ ಆದೇಶವು,-

(ಎ) ಆದೇಶದ ಮೇರೆಗೆ ಸ್ಥಾನಬದ್ಧತೆಯಲ್ಲಿಡಬೇಕಾದ ವ್ಯಕ್ತಿಯು ರಾಜ್ಯದೊಳಗಿದ್ದು , ಆದೇಶವನ್ನು ಮಾಡುವ ಅಧಿಕಾರಿಯ ಪ್ರಾದೇಶಿಕ ಅಧಿಕಾರ ವ್ಯಾಪ್ತಿಯ ಪರಿಮಿತಿಯಿಂದ ಹೊರಗಿರುವನೆಂಬ; ಅಥವಾ

(ಬಿ) ಅಂಥ ವ್ಯಕ್ತಿಯ ಸ್ಥಾನಬದ್ಧತೆಯ ಸ್ಥಳ ರಾಜ್ಯದೊಳಗಿದ್ದರೂ, ಸದರಿ ಪರಿಮಿತಿಯಿಂದ ಹೊರಗಿದೆಯೆಂಬ

-ಕಾರಣ ಮಾತ್ರದಿಂದಲೇ ಅಮಾನ್ಯವಾಗತಕ್ಕದ್ದಲ್ಲ ಅಥವಾ ಜಾರಿಗೊಳ್ಳದೆ ಇರತಕ್ಕದ್ದಲ್ಲ.

[1][**6ಎ. ಸ್ಥಾನಬದ್ಧತೆಗೆ ಕಾರಣಗಳು ಪ್ರತ್ಯೇಕವಾಗಿರುವದು:-** 3ನೇ ಪ್ರಕರಣದ (1) ನೇ ಉಪಪ್ರಕರಣ ಅಥವಾ (2) ನೇ ಉಪ ಪ್ರಕರಣದ ಅಡಿಯಲ್ಲಿ ಎರಡು ಅಥವಾ ಅದಕ್ಕೂ ಹೆಚ್ಚು ಕಾರಣಗಳ ಮೇಲೆ ಮಾಡಲಾಗಿರುವ ಸ್ಥಾನಬದ್ಧತಾ ಆದೇಶಕ್ಕೆ ಅನುಸಾರವಾಗಿ ಒಬ್ಬ ವ್ಯಕ್ತಿಯನ್ನು ಸ್ಥಾನಬದ್ಧತೆಯಲ್ಲಿ ಇಟ್ಟಿರುವಲ್ಲಿ ಅಂಥ ಸ್ಥಾನಬದ್ಧತಾ ಆದೇಶವನ್ನು ಅಂಥ ಪ್ರತಿಯೊಂದು ಕಾರಣದ ಮೇಲೆ ಪ್ರತ್ಯೇಕವಾಗಿ ಮಾಡಲಾಗಿದೆ ಎಂದು ಭಾವಿಸತಕ್ಕದ್ದು, ಮತ್ತು ಅದಕ್ಕನುಸಾರವಾಗಿ,-

(ಎ) ಅಂಥ ಆದೇಶವು,-

(i) ಸಂದಿಗ್ದವಾಗಿದೆ/ವೆ ಯೆಂಬ;

(ii) ಅಸ್ತಿತ್ವದಲ್ಲಿಲ್ಲವೆಂಬ;

(iii) ಸುಸಂಬದ್ಧವಲ್ಲವೆಂಬ;

(iv) ಅಂಥ ವ್ಯಕ್ತಿಗೆ ಸಂಬಂಧಿಸಿದ್ದಲ್ಲ ಅಥವಾ ಪ್ರತ್ಯೇಕವಾಗಿ ಸಂಬಂಧಿಸಿದ್ದಲ್ಲವೆಂಬ; ಅಥವಾ

(v) ಇತರ ಯಾವುದೇ ಕಾರಣಕ್ಕಾಗಿ ಅಮಾನ್ಯವಾಗಿದೆ ಎಂಬ

-ಒಂದು ಅಥವಾ ಕೆಲವು ಕಾರಣಗಳ ಮೇಲೆ ಮಾತ್ರವೇ ಅಸಿಂಧುವೆಂದು ಅಥವಾ ಅಪ್ರವರ್ತನೀಯವೆಂದು ಭಾವಿಸತಕ್ಕದ್ದಲ್ಲ;

ಆದ್ದರಿಂದ, ಸರ್ಕಾರಕ್ಕೆ ಅಥವಾ ಅಂಥ ಸ್ಥಾನಬದ್ಧತಾ ಆದೇಶವನ್ನು ಹೊರಡಿಸುವ ಅಧಿಕಾರಿಗೆ ಉಳಿದ ಕಾರಣ ಅಥವಾ ಕಾರಣಗಳಿಗೆ ಸಂಬಂಧಿಸಿದಂತೆ 3 ನೇ ಪ್ರಕರಣದ (1) ನೇ ಉಪ-ಪ್ರಕರಣದಲ್ಲಿ ಉಪಬಂಧಿಸಿದುದರ ಬಗ್ಗೆ ಮನದಟ್ಟಾಗಿರಬಹುದೆಂದು ಮತ್ತು ಆ ಸ್ಥಾನಬದ್ಧತಾ ಆದೇಶವನ್ನು ಹೊರಡಿಸಿರಬಹುದೆಂದು ತೀರ್ಮಾನಿಸಲು ಸಾಧ್ಯವಾಗುವುದಿಲ್ಲ;

(ಬಿ) ಸರ್ಕಾರಕ್ಕೆ ಅಥವಾ ಸ್ಥಾನಬದ್ಧತಾ ಆದೇಶವನ್ನು ಹೊರಡಿಸುವ ಅಧಿಕಾರಿಗೆ ಉಳಿದ ಕಾರಣ ಅಥವಾ ಕಾರಣಗಳಿಗೆ ಸಂಬಂಧಿಸಿದಂತೆ (1) ನೇ ಉಪಪ್ರಕರಣದಲ್ಲಿ ಉಪಬಂಧಿಸಿದುದರ ಬಗ್ಗೆ ಮನದಟ್ಟಾದ ತರುವಾಯವೇ ಸದರಿ (1) ನೇ ಉಪಪ್ರಕರಣದ ಅಥವಾ (2) ನೇ ಉಪ ಪ್ರಕರಣದ ಅಡಿಯಲ್ಲಿನ ಸ್ಥಾನಬದ್ಧತಾ ಆದೇಶವನ್ನು ಹೊರಡಿಸಲಾಗಿದೆಯೆಂದು ಭಾವಿಸತಕ್ಕದ್ದು.][1]

1. 1987ರ ಅಧಿನಿಯಮ 22ರ ಮೂಲಕ 20.1.1987ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.

**7. ತಲೆಮರೆಸಿಕೊಂಡಿರುವ ವ್ಯಕ್ತಿಗಳ ಸಂಬಂಧದಲ್ಲಿ ಅಧಿಕಾರಗಳು.-** (1) ಯಾವ ವ್ಯಕ್ತಿಯ ಸಂಬಂಧದಲ್ಲಿ ಒಂದು ಸ್ಥಾನಬದ್ಧತಾ ಆದೇಶವನ್ನು ಹೊರಡಿಸಲಾಗಿದೆಯೋ, ಆ ವ್ಯಕ್ತಿಯು ತಲೆಮರೆಸಿಕೊಂಡಿದ್ದಾನೆಂದು ಅಥವಾ ಆದೇಶವನ್ನು ಜಾರಿಗೊಳಿಸಲು ಸಾಧ್ಯವಾಗದಂತೆ ಬಚ್ಚಿಟ್ಟುಕೊಂಡಿದ್ದಾನೆಂದು ರಾಜ್ಯ ಸರ್ಕಾರವು ಅಥವಾ 3ನೇ ಪ್ರಕರಣದ (2)ನೇ ಉಪ ಪ್ರಕರಣದಲ್ಲಿ ಉಲ್ಲೇಖಿತನಾದ ಒಬ್ಬ ಅಧಿಕಾರಿಯು ನಂಬಲು ಕಾರಣವಿದ್ದರೆ, ಆಗ ದಂಡ ಪ್ರಕ್ರಿಯಾ ಸಂಹಿತೆ, 1973ರ (1974ರ ಕೇಂದ್ರಾಧಿನಿಯಮ 2) 82 ರಿಂದ 86ರವರೆಗಿನ (ಎರಡೂ ಪ್ರಕರಣಗಳೂ ಸೇರಿದಂತೆ) ಪ್ರಕರಣಗಳ ಉಪಬಂಧಗಳು ಈ ಉಪಪ್ರಕರಣದಲ್ಲಿ ಉಲ್ಲೇಖಿಸಲಾದ ಮಾರ್ಪಾಡುಗಳಿಗೊಳಪಟ್ಟು, ಅಂಥ ವ್ಯಕ್ತಿಗೆ ಮತ್ತು ಅವನ ಸ್ವತ್ತಿಗೆ ಅನ್ವಯವಾಗತಕ್ಕದ್ದು ಮತ್ತು ಅಂಥ ವ್ಯಕ್ತಿಯು ಸಾಮಾನ್ಯವಾಗಿ ವಾಸಿಸುವ ಸ್ಥಳ ಯಾವುದೇ ಇರಲಿ, ಅವನ ವಿರುದ್ಧ ಮಾಡಿದ ಸ್ಥಾನಬದ್ಧತಾ ಆದೇಶವನ್ನು ಸಕ್ಷಮ ನ್ಯಾಯಾಲಯವು ಹೊರಡಿಸಿದ ಒಂದು ವಾರಂಟ್ ಎಂದು ಭಾವಿಸತಕ್ಕದ್ದು. ಸ್ಥಾನಬದ್ಧತಾ ಆದೇಶವನ್ನು ರಾಜ್ಯ ಸರ್ಕಾರವು ಮಾಡಿರುವಲ್ಲಿ, ಸಂದರ್ಭಾನುಸಾರವಾಗಿ ಜಿಲ್ಲಾ ಮ್ಯಾಜಿಸ್ಟ್ರೇಟರ ದರ್ಜೆಗೆ ಕಡಿಮೆಯದಲ್ಲದ ದರ್ಜೆಯ ಒಬ್ಬ ಅಧಿಕಾರಿಯು ಅಥವಾ ರಾಜ್ಯ ಸರ್ಕಾರದಿಂದ ಈ ಸಂಬಂಧವಾಗಿ ಪ್ರಾಧಿಕೃತರಾದ ಪೊಲೀಸ್ ಆಯುಕ್ತರು ಅಥವಾ 3ನೇ ಪ್ರಕರಣದ (2)ನೇ ಉಪಪ್ರಕರಣದಲ್ಲಿ ಹೇಳಲಾದ ಅಧಿಕಾರಿಯು ಸ್ಥಾನಬದ್ಧತಾ ಆದೇಶವನ್ನು ಹೊರಡಿಸಿದ್ದರೆ ಅಂಥ ಅಧಿಕಾರಿಯು, ಅವನ ಸಾಮಾನ್ಯ ಅಧಿಕಾರ ವ್ಯಾಪ್ತಿಯು ಯಾವುದೇ ಇದ್ದರೂ, ಅಂಥ ವ್ಯಕ್ತಿಯ ಸಂಬಂಧದಲ್ಲಿ ಘೋಷಣೆ ಹೊರಡಿಸುವುದಕ್ಕೆ ಮತ್ತು ರಾಜ್ಯದ ಯಾವುದೇ ಭಾಗದಲ್ಲಿರುವ ಅವನ ಸ್ವತ್ತನ್ನು ಜಪ್ತಿ ಮಾಡಲು ಮತ್ತು ಮಾರಾಟ ಮಾಡಲು ಮತ್ತು ಸದರಿ ಪ್ರಕರಣಗಳ ಅಡಿಯಲ್ಲಿ ಯಾವುದೇ ಇತರ ಕ್ರಮಕೈಗೊಳ್ಳಲು ಸದರಿ ಸಂಹಿತೆಯ 82, 83, 84 ಮತ್ತು 85ನೇ ಪ್ರಕರಣಗಳ ಅಡಿಯಲ್ಲಿ ಸಕ್ಷಮ ನ್ಯಾಯಾಲಯದ ಎಲ್ಲ ಅಧಿಕಾರಗಳನ್ನು ಚಲಾಯಿಸಲು ಅಧಿಕಾರ ಹೊಂದಿರುವನೆಂದು ಭಾವಿಸತಕ್ಕದ್ದು. ಜಪ್ತಿ ಮಾಡಿದ ಸ್ವತ್ತನ್ನು ಹಿಂದಿರುಗಿಸುವುದಕ್ಕಾಗಿ ಸಲ್ಲಿಸಿದ ಒಂದು ಅರ್ಜಿಯನ್ನು ತಿರಸ್ಕರಿಸುವ ಕುರಿತು ಯಾವನೇ ಅಂಥ ಅಧಿಕಾರಿಯ ಯಾವುದೇ ಆದೇಶದ ವಿರುದ್ಧದ ಒಂದು ಅಪೀಲನ್ನು, ಸದರಿ ಸಂಹಿತೆಯ 86ನೇ ಪ್ರಕರಣದಲ್ಲಿ ಉಪಬಂಧಿಸಲಾದಂತೆ, ಸದರಿ ವ್ಯಕ್ತಿಯು ಸಾಮಾನ್ಯವಾಗಿ ವಾಸಿಸುವ ಸ್ಥಳದ ಅಧಿಕಾರ ವ್ಯಾಪ್ತಿಯನ್ನು ಹೊಂದಿರುವ ಸೆಷನ್ಸ್ ನ್ಯಾಯಾಲಯದ ಮುಂದೆ ಮಾಡತಕ್ಕದ್ದು.

(2) (ಎ) (1) ನೇ ಉಪ ಪ್ರಕರಣದಲ್ಲಿ ಏನೇ ಒಳಗೊಂಡಿದ್ದರೂ, ಯಾವ ವ್ಯಕ್ತಿಯ ಸಂಬಂಧದಲ್ಲಿ ಒಂದು ಸ್ಥಾನಬದ್ಧತಾ ಆದೇಶವನ್ನು ಹೊರಡಿಸಲಾಗಿದೆಯೋ ಆ ವ್ಯಕ್ತಿಯು ತಲೆಮರೆಸಿಕೊಂಡಿದ್ದಾನೆಂದು ಅಥವಾ ಆದೇಶವನ್ನು ಜಾರಿಗೊಳಿಸಲು ಸಾಧ್ಯವಾಗದಂತೆ ಬಚ್ಚಿಟ್ಟುಕೊಂಡಿದ್ದಾನೆಂದು, ರಾಜ್ಯ ಸರ್ಕಾರವು ಅಥವಾ 3ನೇ ಪ್ರಕರಣದ (2)ನೇ ಉಪ ಪ್ರಕರಣದಲ್ಲಿ ಉಲ್ಲೇಖಿತನಾದ ಒಬ್ಬ ಅಧಿಕಾರಿಯು ನಂಬಲು ಕಾರಣವಿದ್ದರೆ, ರಾಜ್ಯ ಸರ್ಕಾರವು ಅಥವಾ ಸಂದರ್ಭಾನುಸಾರ ಅಧಿಕಾರಿಯು ಸರ್ಕಾರಿ ರಾಜ್ಯ ಪತ್ರದಲ್ಲಿ ಅಧಿಸೂಚನೆಯ ಮೂಲಕ, ಆದೇಶದಲ್ಲಿ ನಿರ್ದಿಷ್ಟಪಡಿಸಬಹುದಾದಂಥ ಕಾಲದಲ್ಲಿ ಮತ್ತು ಅಂಥ ಅವಧಿಯೊಳಗೆ ಸದರಿ ವ್ಯಕ್ತಿಯು, ಅಂಥ ಅಧಿಕಾರಿಯ ಮುಂದೆ ಹಾಜರಾಗಬೇಕೆಂದು ನಿರ್ದೇಶಿಸಬಹುದು.

(ಬಿ) ಅಂಥ ವ್ಯಕ್ತಿಯು, ಅಂಥ ಆದೇಶವನ್ನು ಪಾಲಿಸಲು ತಪ್ಪಿದರೆ, ಅದನ್ನು ಪಾಲಿಸಲು ತನಗೆ ಸಾಧ್ಯವಾಗಲಿಲ್ಲವೆಂಬುದನ್ನು ರುಜುವಾತುಪಡಿಸಿದ ಹೊರತು ಮತ್ತು ಆದೇಶದಲ್ಲಿ ನಿರ್ದಿಷ್ಟಪಡಿಸಿದ ಅವಧಿಯೊಳಗೆ, ಅದನ್ನು ಪಾಲಿಸಲು ಸಾಧ್ಯವಾಗದಿದ್ದುದಕ್ಕೆ ಕಾರಣಗಳನ್ನು ಮತ್ತು ತನ್ನ ಚಲನವಲನಗಳ ಬಗ್ಗೆ ಆದೇಶದಲ್ಲಿ ತಿಳಿಸಿದ ಅಧಿಕಾರಿಗೆ ತಿಳಿಸಿದ್ದ ಹೊರತು ಅಥವಾ ಆದೇಶದಲ್ಲಿ ತಿಳಿಸಿದ ವ್ಯಕ್ತಿಗೆ ತನಗೆ ಹಾಗೆ ಮಾಡುವುದು ಸಾಧ್ಯವಾಗದಿದ್ದ ಬಗ್ಗೆ ರುಜುವಾತುಪಡಿಸಿದ ಹೊರತು, ಅಪರಾಧ ನಿರ್ಣಯವಾದ ತರುವಾಯ, ಒಂದು ವರ್ಷದವರೆಗೆ ವಿಸ್ತರಿಸಬಹುದಾದ ಕಾರಾವಾಸದಿಂದ ಅಥವಾ ಜುಲ್ಮಾನೆಯಿಂದ ಅಥವಾ ಅವೆರಡರಿಂದಲೂ ದಂಡಿತನಾಗತಕ್ಕದ್ದು.

(ಸಿ) ಸದರಿ ಸಂಹಿತೆಯಲ್ಲಿ ಏನೇ ಒಳಗೊಂಡಿದ್ದರೂ, (ಬಿ) ಖಂಡದ ಅಡಿಯಲ್ಲಿನ ಪ್ರತಿಯೊಂದು ಅಪರಾಧವು ಸಂಜ್ಞೇಯವಾಗಿರತಕ್ಕದ್ದು.

**8. ಆದೇಶದಿಂದ ಬಾಧಿತರಾದ ವ್ಯಕ್ತಿಗಳಿಗೆ ಸ್ಥಾನಬದ್ಧತಾ ಆದೇಶದ ಕಾರಣಗಳನ್ನು ಬಹಿರಂಗ ಪಡಿಸುವುದು:-** (1) ಸ್ಥಾನಬದ್ಧತಾ ಆದೇಶಕ್ಕನುಸಾರವಾಗಿ ಒಬ್ಬ ವ್ಯಕ್ತಿಯನ್ನು ಸ್ಥಾನದ್ದತೆಯಲ್ಲಿಡಲಾಗಿದ್ದರೆ, ಆದೇಶವನ್ನು ಮಾಡುವ ಪ್ರಾಧಿಕಾರಿಯು, ಸಾಧ್ಯವಾದಷ್ಟು ಬೇಗನೆ, ಆದರೆ, ಸ್ಥಾನಬದ್ಧತೆಯಲ್ಲಿರಿಸಿದ ದಿನದಿಂದ ಐದು ದಿನಗಳಿಗೆ ಮೀರದಂತೆ, ಆದೇಶವನ್ನು ಯಾವ ಕಾರಣಗಳಿಗಾಗಿ ಮಾಡಲಾಯಿತೆಂಬ ಬಗ್ಗೆ ಅವನಿಗೆ ತಿಳಿಸತಕ್ಕದ್ದು ಮತ್ತು ಆದೇಶದ ವಿರುದ್ಧ ರಾಜ್ಯ ಸರ್ಕಾರಕ್ಕೆ ಒಂದು ಮನವಿ ಸಲ್ಲಿಸಲು ಆದಷ್ಟು ಬೇಗನೆ ಅವನಿಗೆ ಅವಕಾಶ ನೀಡತಕ್ಕದ್ದು.

(2) (1) ನೇ ಉಪ ಪ್ರಕರಣದಲ್ಲಿರುವುದಾವುದೂ, ಯಾವ ಸಂಗತಿಗಳನ್ನು ಬಹಿರಂಗಪಡಿಸುವುದು ಸಾರ್ವಜನಿಕ ಹಿತಕ್ಕೆ ವಿರುದ್ಧವಾಗಿದೆ ಎಂದು ಪ್ರಾಧಿಕಾರವು ಅಭಿಪ್ರಾಯಪಡುವುದೋ ಆ ಸಂಗತಿಗಳನ್ನು ಬಹಿರಂಗಪಡಿಸುವಂತೆ ಪ್ರಾಧಿಕಾರವನ್ನು ಅಗತ್ಯಪಡಿಸತಕ್ಕದ್ದಲ್ಲ.

**9. ಸಲಹಾ ಮಂಡಲಿಯ ರಚನೆ:-** (1) ರಾಜ್ಯ ಸರ್ಕಾರವು, ಈ ಅಧಿನಿಯಮದ ಉದ್ದೇಶಕ್ಕಾಗಿ, ಅಗತ್ಯವೆಂದು ಕಂಡುಬಂದಾಗಲೆಲ್ಲ ಒಂದು ಅಥವಾ ಹೆಚ್ಚು ಸಲಹಾ ಮಂಡಲಿಗಳನ್ನು ರಚಿಸತಕ್ಕದ್ದು.

(2) ಅಂಥ ಪ್ರತಿಯೊಂದು ಮಂಡಲಿಯ ರಚನೆಯು, ಕರ್ನಾಟಕ ಉಚ್ಚ ನ್ಯಾಯಾಲಯದ ಮುಖ್ಯ ನ್ಯಾಯಾಧೀಶರ ಶಿಫಾರಸಿಗನುಸಾರವಾಗಿರತಕ್ಕದ್ದು.

(3) ಅಂಥ ಪ್ರತಿಯೊಂದು ಮಂಡಲಿಯು ಒಬ್ಬ ಅಧ್ಯಕ್ಷ ಮತ್ತು ಇಬ್ಬರು ಇತರ ಸದಸ್ಯರನ್ನು ಹೊಂದಿರತಕ್ಕದ್ದು ಮತ್ತು ಅಧ್ಯಕ್ಷರು ಕರ್ನಾಟಕ ಉಚ್ಚ ನ್ಯಾಯಾಲಯದಲ್ಲಿ ಸೇವೆ ಸಲ್ಲಿಸುತ್ತಿರುವ ನ್ಯಾಯಾಧೀಶನಾಗಿರತಕ್ಕದ್ದು ಮತ್ತು ಇತರ ಸದಸ್ಯರು, ಯಾವುದೇ ಉಚ್ಚ ನ್ಯಾಯಾಲಯದಲ್ಲಿ ಸೇವೆಸಲ್ಲಿಸುತ್ತಿರುವ ಅಥವಾ ನಿವೃತ್ತ ರಾದ ನ್ಯಾಯಾಧೀಶರಾಗಿರತಕ್ಕದ್ದು.

**10. ಸಲಹಾ ಮಂಡಲಿಗೆ ಉಲ್ಲೇಖಿಸುವುದು:-** ಈ ಅಧಿನಿಯಮದ ಅಡಿಯಲ್ಲಿ ಒಂದು ಸ್ಥಾನಬದ್ಧತಾ ಆದೇಶವನ್ನು ಹೊರಡಿಸಲಾದ ಪ್ರತಿಯೊಂದು ಸಂದರ್ಭದಲ್ಲಿ , ಆ ಆದೇಶದ ಅಡಿಯಲ್ಲಿ ವ್ಯಕ್ತಿಯನ್ನು ಸ್ಥಾನಬದ್ಧತೆಯಲ್ಲಿ ಇರಿಸಲಾದ ದಿನಾಂಕದಿಂದ ಮೂರು ವಾರಗಳೊಳಗೆ, ರಾಜ್ಯ ಸರ್ಕಾರವು, 9ನೇ ಪ್ರಕರಣದ ಮೂಲಕ ರಚಿತವಾದ ಸಲಹಾ ಮಂಡಲಿಯ ಮುಂದೆ, ಯಾವ ಕಾರಣಗಳಿಗಾಗಿ ಆದೇಶವನ್ನು ಮಾಡಲಾಯಿತೆಂಬುದನ್ನು ಮತ್ತು ಆದೇಶದಿಂದ ಬಾಧಿತನಾದ ವ್ಯಕ್ತಿಯ ಮನವಿಗಳು, ಯಾವುವಾದರೂ ಇದ್ದರೆ, ಅವುಗಳನ್ನು ಮತ್ತು ಅಧಿಕಾರಿಯು ಹೊರಡಿಸಿದ ಆದೇಶವಾಗಿದ್ದ ಸಂದರ್ಭದಲ್ಲಿ, (3)ನೇ ಪ್ರಕರಣದ (3)ನೇ ಉಪ ಪ್ರಕರಣದ ಅಡಿಯಲ್ಲಿ, ಅಂಥ ಅಧಿಕಾರಿಯ ವರದಿಯನ್ನು ಸಹ ಮಂಡಿಸತಕ್ಕದ್ದು.

**11. ಸಲಹಾ ಮಂಡಲಿಯ ಕಾರ್ಯವಿಧಾನ:-** (1) ಸಲಹಾ ಮಂಡಲಿಯು, ತನ್ನ ಮುಂದೆ ಮಂಡಿಸಲಾದ ವಿಷಯಗಳನ್ನು ಪರಿಶೀಲಿಸಿ, ಮತ್ತು ತಾನು ಅವಶ್ಯವೆಂದು ಭಾವಿಸಬಹುದಾದಂಥ ಇನ್ನೂ ಹೆಚ್ಚಿನ ಮಾಹಿತಿಯನ್ನು, ರಾಜ್ಯ ಸರ್ಕಾರದಿಂದ ಅಥವಾ ರಾಜ್ಯ ಸರ್ಕಾರದ ಮೂಲಕ ಈ ಉದ್ದೇಶಕ್ಕಾಗಿ ನಿಯೋಜಿಸಿದ ಯಾರೇ ವ್ಯಕ್ತಿಯಿಂದ ಅಥವಾ ಸಂಬಂಧಪಟ್ಟ ಯಾರೇ ವ್ಯಕ್ತಿಯಿಂದ ತರಿಸಿಕೊಂಡ ತರುವಾಯ ಮತ್ತು ಯಾವುದೇ ನಿರ್ದಿಷ್ಟ ಪ್ರಕರಣದಲ್ಲಿ ಸಂಬಂಧಪಟ್ಟ ವ್ಯಕ್ತಿಯು ತನ್ನ ಅಹವಾಲನ್ನು ಹೇಳಿಕೊಳ್ಳಲು ಅಪೇಕ್ಷಿಸಿದ್ದಾನೆಂದು ಮತ್ತು ಹಾಗೆ ಅಹವಾಲನ್ನು ಕೇಳುವುದು ಅತ್ಯಾವಶ್ಯಕವೆಂದು ಸಲಹಾ ಮಂಡಲಿಯು ಪರಿಗಣಿಸಿದರೆ, ಅವನನ್ನು ವೈಯಕ್ತಿಕವಾಗಿ ವಿಚಾರಣೆ ಮಾಡಿದ ತರುವಾಯ, ಸಂಬಂಧಪಟ್ಟ ವ್ಯಕ್ತಿಯನ್ನು ಸ್ಥಾನಬದ್ಧತೆಯಲ್ಲಿರಿಸಿದ ದಿನಾಂಕದಿಂದ ಏಳು ವಾರಗಳೊಳಗೆ, ರಾಜ್ಯ ಸರ್ಕಾರಕ್ಕೆ ತನ್ನ ವರದಿಯನ್ನು ಒಪ್ಪಿಸತಕ್ಕದ್ದು.

(2) ಸಲಹಾ ಮಂಡಲಿಯ ವರದಿಯಲ್ಲಿ, ಸಂಬಂಧಪಟ್ಟ ವ್ಯಕ್ತಿಯನ್ನು ಸ್ಥಾನಬದ್ಧತೆಯಲ್ಲಿರಿಸಿದ್ದಕ್ಕೆ ಕಾರಣಗಳು ಸಾಕಷ್ಟಿವೆಯೇ ಅಥವಾ ಇಲ್ಲವೇ ಎಂಬ ಬಗ್ಗೆ ಸಲಹಾ ಮಂಡಲಿಯು ತನ್ನ ಅಭಿಪ್ರಾಯವನ್ನು, ವರದಿಯ ಪ್ರತ್ಯೇಕ ಭಾಗದಲ್ಲಿ ತಿಳಿಸತಕ್ಕದ್ದು.

(3) ಸಲಹಾ ಮಂಡಲಿಯ ಸದಸ್ಯರಲ್ಲಿ ಭಿನ್ನಾಭಿಪ್ರಾಯವಿದ್ದಾಗ, ಅಂಥ ಸದಸ್ಯರ ಬಹುಮತದ ಅಭಿಪ್ರಾಯವನ್ನು ಮಂಡಲಿಯ ಅಭಿಪ್ರಾಯವೆಂದು ಭಾವಿಸತಕ್ಕದ್ದು.

(4) ಸಲಹಾ ಮಂಡಲಿಯ ಕಾರ್ಯಕಲಾಪಗಳು ಮತ್ತು ಅದರ ವರದಿಯು, ಸಲಹಾ ಮಂಡಲಿಯ ಅಭಿಪ್ರಾಯವನ್ನು ನಿರ್ದಿಷ್ಟಪಡಿಸಿರುವ ವರದಿಯ ಭಾಗವನ್ನು ಹೊರತುಪಡಿಸಿದಂತೆ, ಗೌಪ್ಯವಾಗಿರತಕ್ಕದ್ದು.

(5) ಈ ಪ್ರಕರಣದಲ್ಲಿರುವುದಾವುದೂ, ಯಾರ ವಿರುದ್ಧ ಒಂದು ಸ್ಥಾನಬದ್ಧತಾ ಆದೇಶವನ್ನು ಮಾಡಲಾಗಿದೆಯೋ ಆ ವ್ಯಕ್ತಿಯನ್ನು, ಸಲಹಾ ಮಂಡಲಿಯ ಉಲ್ಲೇಖಕ್ಕೆ ಸಂಬಂಧಿಸಿದ ಯಾವುದೇ ವಿಷಯದ ಬಗ್ಗೆ ಯಾರೇ ವಕೀಲನ ಮೂಲಕ ಹಾಜರಾಗಲು ಹಕ್ಕುಳ್ಳವನನ್ನಾಗಿಸತಕ್ಕದ್ದಲ್ಲ.

**12. ಸಲಹಾ ಮಂಡಲಿಯ ವರದಿಯ ಬಗ್ಗೆ ಕ್ರಮ:-** (1) ಸಲಹಾ ಮಂಡಲಿಯು, ಒಬ್ಬ ವ್ಯಕ್ತಿಯನ್ನು ಸ್ಥಾನಬದ್ಧತೆಯಲ್ಲಿಡುವುದಕ್ಕೆ ಸಾಕಷ್ಟು ಕಾರಣಗಳಿವೆ ಎಂಬ ತನ್ನ ಅಭಿಪ್ರಾಯವನ್ನು ವರದಿಮಾಡಿದ ಯಾವುದೇ ಸಂದರ್ಭದಲ್ಲಿ ರಾಜ್ಯ ಸರ್ಕಾರವು, ಸಂಬಂಧಪಟ್ಟ ವ್ಯಕ್ತಿಯ ಅಂಥ ಸ್ಥಾನಬದ್ಧತೆಯನ್ನು ಸ್ಥಿರೀಕರಿಸಬಹುದು ಮತ್ತು ತಾನು ಸೂಕ್ತವೆಂದು ಭಾವಿಸುವಂತೆ, 13ನೇ ಪ್ರಕರಣದಲ್ಲಿ ನಿರ್ದಿಷ್ಟಪಡಿಸಿದ ಗರಿಷ್ಠ ಅವಧಿಯನ್ನು ಮೀರದಂತೆ ಅದನ್ನು ಮುಂದುವರಿಸಬಹುದು.

(2) ಸಲಹಾ ಮಂಡಲಿಯು, ಸಂಬಂಧಪಟ್ಟ ವ್ಯಕ್ತಿಯ ಸ್ಥಾನಬದ್ಧತೆಗೆ ಸಾಕಷ್ಟು ಕಾರಣಗಳಿಲ್ಲವೆಂದು, ತನ್ನ ಅಭಿಪ್ರಾಯವನ್ನು ವರದಿಮಾಡಿದ ಯಾವುದೇ ಸಂದರ್ಭದಲ್ಲಿ, ರಾಜ್ಯ ಸರ್ಕಾರವು, ಸ್ಥಾನಬದ್ಧತಾ ಆದೇಶವನ್ನು ರದ್ದುಪಡಿಸತಕ್ಕದ್ದು ಮತ್ತು ಕೂಡಲೇ ವ್ಯಕ್ತಿಯನ್ನು ಬಿಡುಗಡೆ ಮಾಡುವಂತೆ ಮಾಡತಕ್ಕದ್ದು.

**13. ಸ್ಥಾನ ಬದ್ಧತೆಯ ಗರಿಷ್ಠ ಅವಧಿ:-** 12ನೇ ಪ್ರಕರಣದ ಅಡಿಯಲ್ಲಿ ಸ್ಥಿರೀಕರಿಸಲಾದ, ಈ ಅಧಿನಿಯಮದ ಅಡಿಯಲ್ಲಿ ಮಾಡಿದ ಸ್ಥಾನಬದ್ಧತಾ ಆದೇಶಕ್ಕನುಸಾರವಾಗಿ, ಯಾರೇ ವ್ಯಕ್ತಿಯನ್ನು ಸ್ಥಾನಬದ್ಧತೆಯಲ್ಲಿಡಬಹುದಾದ ಗರಿಷ್ಠ ಅವಧಿಯು, ಸ್ಥಾನಬದ್ಧತಾ ದಿನಾಂಕದಿಂದ ಹನ್ನೆರಡು ತಿಂಗಳುಗಳಾಗಿರತಕ್ಕದ್ದು.

**14. ಸ್ಥಾನಬದ್ಧತಾ ಆದೇಶಗಳನ್ನು ರದ್ದು ಮಾಡುವುದು:-** (1) ಕರ್ನಾಟಕ ಸಾಮಾನ್ಯ ಖಂಡಗಳ ಅಧಿನಿಯಮ, 1899ರ 21ನೇ ಪ್ರಕರಣದ ಉಪಬಂಧಗಳಿಗೆ ಪ್ರತಿಕೂಲವಾಗದಂತೆ, 3ನೇ ಪ್ರಕರಣದ (2)ನೇ ಉಪ ಪ್ರಕರಣದಲ್ಲಿ ನಮೂದಿಸಲಾದ ಅಧಿಕಾರಿಯು ಮಾಡಿದ ಯಾವುದೇ ಆದೇಶದಲ್ಲಿ ಏನೇ ಇದ್ದರೂ, ಸ್ಥಾನಬದ್ಧತಾ ಆದೇಶವನ್ನು ರಾಜ್ಯ ಸರ್ಕಾರವು ಯಾವುದೇ ಕಾಲದಲ್ಲಿ ರದ್ದುಪಡಿಸಬಹುದು ಅಥವಾ ಮಾರ್ಪಾಟು ಮಾಡಬಹುದು.

[1][(2) ಒಂದು ಸ್ಥಾನಬದ್ಧತಾ ಆದೇಶದ ರದ್ದಿಯಾತಿಯು ಅಥವಾ ಮುಕ್ತಾಯವು (ಇನ್ನು ಮುಂದೆ ಈ ಉಪಪ್ರಕರಣದಲ್ಲಿ ಹಿಂದಿನ ಸ್ಥಾನಬದ್ಧತಾ ಆದೇಶ ಎಂಬುದಾಗಿ ಉಲ್ಲೇಖಿಸಲಾಗಿದೆ), ಅಂಥ ಹಿಂದಿನ ಸ್ಥಾನಬದ್ಧತಾ ಆದೇಶವು ಕರ್ನಾಟಕ ಕಳ್ಳಭಟ್ಟಿ ವ್ಯಾಪಾರಿಗಳು, ಮಾದಕವಸ್ತು ಅಪರಾಧಿಗಳ, ಜೂಜುಕೋರರ, ಗೂಂಡಾಗಳ, ಅನೈತಿಕ ವ್ಯವಹಾರದ ಅಪರಾಧಿಗಳ ಮತ್ತು ಕೊಳಚೆ ಪ್ರದೇಶ ಕಬಳಿಸುವವರ ಅಪಾಯಕಾರಿ ಚಟುವಟಿಕೆಗಳ ಪ್ರತಿಬಂಧಕ (ತಿದ್ದುಪಡಿ) ಅಧಿನಿಯಮ, 1987 ಪ್ರಾರಂಭವಾಗುವುದಕ್ಕೆ ಮೊದಲು ಮಾಡಿರಲಿ ಅಥವಾ ಆ ತರುವಾಯ ಮಾಡಿರಲಿ, ಅದು, ಅದೇ ವ್ಯಕ್ತಿಯ ವಿರುದ್ಧ 3 ನೇ ಪ್ರಕರಣದ ಅಡಿಯಲ್ಲಿ ಇನ್ನೊಂದು ಸ್ಥಾನಬದ್ಧತಾ ಆದೇಶವನ್ನು (ಇನ್ನು ಮುಂದೆ ಈ ಉಪ ಪ್ರಕರಣದಲ್ಲಿ ತರುವಾಯದ ಸ್ಥಾನಬದ್ಧತಾ ಆದೇಶವೆಂದು ಉಲ್ಲೇಖಿಸಲಾಗಿದೆ) ಮಾಡುವುದನ್ನು ಪ್ರತಿಷೇಧಿಸತಕ್ಕದ್ದಲ್ಲ:

ಪರಂತು, ಅಂಥ ವ್ಯಕ್ತಿಯ ವಿರುದ್ಧ ಮಾಡಲಾದ ಹಿಂದಿನ ಸ್ಥಾನಬದ್ಧತಾ ಆದೇಶವು ರದ್ದುಗೊಂಡ ಅಥವಾ ಕೊನೆಗೊಂಡ ತರುವಾಯ ಯಾವುವೇ ಹೊಸ ಸಂಗತಿ ಉದ್ಭವವಾಗದಿದ್ದ ಸಂದರ್ಭದಲ್ಲಿ, ತರುವಾಯದ ಸ್ಥಾನಬದ್ಧತಾ ಆದೇಶಕ್ಕೆ ಅನುಸಾರವಾಗಿ ಅಂಥ ವ್ಯಕ್ತಿಯನ್ನು ಬಂಧಿಸಿಡಬಹುದಾದ ಗರಿಷ್ಠ ಅವಧಿಯನ್ನು, ಯಾವ ಸಂಬಂಧದಲ್ಲೂ, ಹಿಂದಿನ ಸ್ಥಾನಬದ್ಧತಾ ಆದೇಶದ ಮೇರೆಗಿನ ದಿನಾಂಕದಿಂದ ಹನ್ನೆರಡು ತಿಂಗಳ ಅವಧಿ ಮುಗಿದ ನಂತರವೂ ವಿಸ್ತರಿಸತಕ್ಕದ್ದಲ್ಲ][1].

**15. ಸ್ಥಾನಬದ್ಧತೆಯಲ್ಲಿರಿಸಿದ ವ್ಯಕ್ತಿಯ ತಾತ್ಕಾಲಿಕ ಬಿಡುಗಡೆ:–** (1) ರಾಜ್ಯ ಸರ್ಕಾರವು, ಯಾವುದೇ ಕಾಲದಲ್ಲಿ, ಸ್ಥಾನಬದ್ಧತಾ ಆದೇಶಕ್ಕನುಸಾರವಾಗಿ ಬಂಧಿಸಲಾದ ಯಾರೇ ವ್ಯಕ್ತಿಯನ್ನು ಷರತ್ತುಗಳಿಲ್ಲದೆ ಅಥವಾ ಆ ವ್ಯಕ್ತಿಯು ಒಪ್ಪಿಕೊಳ್ಳುವಂಥ ನಿರ್ದೇಶನದಲ್ಲಿ ನಿರ್ದಿಷ್ಟಪಡಿಸಿದ ಷರತ್ತುಗಳ ಮೇಲೆ, ನಿರ್ದಿಷ್ಟಪಡಿಸಬಹುದಾದ ಯಾವುದೇ ಅವಧಿಗಾಗಿ ಬಿಡುಗಡೆ ಮಾಡಬಹುದೆಂದು ನಿರ್ದೇಶಿಸಬಹುದು ಮತ್ತು ಯಾವುದೇ ಕಾಲದಲ್ಲಿ ಅವನ ಬಿಡುಗಡೆಯನ್ನು ರದ್ದುಪಡಿಸಬಹುದು.

(2) (1)ನೇ ಉಪ ಪ್ರಕರಣದ ಅಡಿಯಲ್ಲಿ, ಯಾರೇ ಸ್ಥಾನಬದ್ಧತೆಯಲ್ಲಿಡುವವನನ್ನು ಬಿಡುಗಡೆ ಮಾಡಲು ನಿರ್ದೇಶಿಸಿರುವಲ್ಲಿ, ನಿರ್ದೇಶನದಲ್ಲಿ ನಿರ್ದಿಷ್ಟಪಡಿಸಿರುವ ಷರತ್ತುಗಳ ಪಾಲನೆಗಾಗಿ, ಜಾಮೀನು ಸಹಿತವಾದ ಅಥವಾ ಜಾಮೀನು ರಹಿತವಾದ ಒಂದು ಬಂಧ ಪತ್ರವನ್ನು ಬರೆದು ಕೊಡುವಂತೆ ಅಗತ್ಯಪಡಿಸಬಹುದು.

(3) (1)ನೇ ಉಪ ಪ್ರಕರಣದ ಅಡಿಯಲ್ಲಿ ಬಿಡುಗಡೆ ಹೊಂದಿದ ಯಾರೇ ವ್ಯಕ್ತಿಯು, ಅವನನ್ನು ಬಿಡುಗಡೆ ಮಾಡಲು ಅಥವಾ ಸಂದರ್ಭಾನುಸಾರ ಅವನ ಬಿಡುಗಡೆಯನ್ನು ರದ್ದುಪಡಿಸಲು ನಿರ್ದೇಶಿಸುವ ಆದೇಶದಲ್ಲಿ ನಿರ್ದಿಷ್ಟಪಡಿಸಿದ ಕಾಲದಲ್ಲಿ ಮತ್ತು ಸ್ಥಳದಲ್ಲಿ ಮತ್ತು ಅಂಥ ಪ್ರಾಧಿಕಾರಿಯ ಮುಂದೆ ಶರಣಾಗತನಾಗತಕ್ಕದ್ದು.

(4) ಯಾರೇ ವ್ಯಕ್ತಿಯು (3)ನೇ ಉಪ ಪ್ರಕರಣದಲ್ಲಿ ನಿರ್ದಿಷ್ಟಪಡಿಸಲಾದ ರೀತಿಯಲ್ಲಿ ಶರಣಾಗತನಾಗಲು ತಪ್ಪಿದರೆ, ಅವನು, ಅಪರಾಧ ನಿರ್ಣಯವಾದ ತರುವಾಯ, ಎರಡು ವರ್ಷಗಳವರೆಗೆ ವಿಸ್ತರಿಸಬಹುದಾದ ಕಾರಾವಾಸ ಶಿಕ್ಷೆಯಿಂದ ಅಥವಾ ಜುಲ್ಮಾನೆಯಿಂದ ಅಥವಾ ಅವೆರಡರಿಂದಲೂ ದಂಡಿತನಾಗತಕ್ಕದ್ದು.

(5) (1)ನೇ ಉಪ ಪ್ರಕರಣದ ಅಡಿಯಲ್ಲಿ ಬಿಡುಗಡೆ ಹೊಂದಿದ ಯಾರೇ ವ್ಯಕ್ತಿಯು, (1)ನೇ ಉಪ ಪ್ರಕರಣದ ಅಡಿಯಲ್ಲಿ ಅವನ ಮೇಲೆ ವಿಧಿಸಲಾದ ಅಥವಾ ಅವನು ಬರೆದುಕೊಟ್ಟ ಬಂಧಪತ್ರದಲ್ಲಿರುವ ಷರತ್ತುಗಳನ್ನು ಈಡೇರಿಸಲು ತಪ್ಪಿದರೆ, ಬಂಧಪತ್ರವನ್ನು ಮುಟ್ಟುಗೋಲು ಹಾಕಿಕೊಳ್ಳಲಾಗಿದೆಯೆಂದು ಘೋಷಿಸತಕ್ಕದ್ದು ಮತ್ತು ಆ ಮೂಲಕ ಬದ್ಧನಾದ ಯಾರೇ ವ್ಯಕ್ತಿಯು, ಆ ಬಗೆಗಿನ ದಂಡವನ್ನು ಸಂದಾಯ ಮಾಡಲು ಬದ್ಧನಾಗಿರತಕ್ಕದ್ದು.

**16. ಸದ್ಭಾವನೆಯಿಂದ ಕೈಗೊಂಡ ಕ್ರಮದ ರಕ್ಷಣೆ:–** ಈ ಅಧಿನಿಯಮದ ಅನುಸರಣೆಯಲ್ಲಿ ಸದ್ಭಾವನೆಯಿಂದ ಕೈಗೊಂಡ ಅಥವಾ ಕೈಗೊಳ್ಳಲು ಉದ್ದೇಶಿಸಿದ ಯಾವುದೇ ಕ್ರಮಕ್ಕಾಗಿ, ರಾಜ್ಯ ಸರ್ಕಾರದ ಅಥವಾ ಯಾರೇ ಅಧಿಕಾರಿಯ ಅಥವಾ ವ್ಯಕ್ತಿಯ ವಿರುದ್ಧ ಯಾವುದೇ ದಾವೆ, ಅಭಿಯೋಗ ಅಥವಾ ಇತರ ಕಾನೂನು ವ್ಯವಹರಣೆಯನ್ನು ಹೂಡತಕ್ಕದ್ದಲ್ಲ.

**17. ಯಾರೇ ಕಳ್ಳಭಟ್ಟಿ ವ್ಯಾಪಾರಿಗಳ, ಮಾದಕವಸ್ತು ಅಪರಾಧಿಗಳ, ಜೂಜುಕೋರರ, ಗೂಂಡಾಗಳ, ಅನೈತಿಕ ವ್ಯವಹಾರ ಅಪರಾಧಿಗಳ ಮತ್ತು ಕೊಳಚೆ ಪ್ರದೇಶಗಳನ್ನು ಕಬಳಿಸುವವರ ವಿರುದ್ಧ ಸ್ಥಾನಬದ್ಧತಾ ಆದೇಶವನ್ನು ಈ ಅಧಿನಿಯಮದ ಅಡಿಯಲ್ಲಿ ಮಾಡಲಾಗಿರುವುದು ಮತ್ತು ರಾಷ್ಟ್ರೀಯ ಭದ್ರತಾ ಅಧಿನಿಯಮದ ಅಡಿಯಲ್ಲಿ ಮಾಡದಿರುವುದು:–** ಈ ಅಧಿನಿಯಮದ ಪ್ರಾರಂಭದಂದು ಅಥವಾ ಆ ತರುವಾಯ, ಕರ್ನಾಟಕ ರಾಜ್ಯದಲ್ಲಿರುವ ಯಾರೇ ಕಳ್ಳಭಟ್ಟಿ ವ್ಯಾಪಾರಿಗೆ, ಮಾದಕವಸ್ತು ಅಪರಾಧಿಗೆ, ಜೂಜುಕೋರನಿಗೆ, ಗೂಂಡಾನಿಗೆ, ಅನೈತಿಕ ವ್ಯವಹಾರ ಅಪರಾಧಿಗೆ ಮತ್ತು ಕೊಳಚೆ ಪ್ರದೇಶಗಳನ್ನು ಕಬಳಿಸುವವನಿಗೆ ಸಂಬಂಧಿಸಿದಂತೆ, ಸಾರ್ವಜನಿಕ ಸುವ್ಯವಸ್ಥೆಯನ್ನು ಕಾಪಾಡಲು ಯಾವುದೇ ರೀತಿಯಲ್ಲಿ ಪ್ರತಿಕೂಲವಾಗಿ ವರ್ತಿಸುವುದರಿಂದ ಅವನನ್ನು ತಡೆಯುವ ಕಾರಣದ ಮೇಲೆ ಅಂಥ ವ್ಯಕ್ತಿಯ ವಿರುದ್ಧ ಯಾವ ಸ್ಥಾನಬದ್ಧತಾ ಆದೇಶವನ್ನು ಹೊರಡಿಸಬಹುದೋ ಅಥವಾ ಹೊರಡಿಸಲು ಸಾಧ್ಯವಿದೆಯೋ ಆ ಯಾವುದೇ ಸ್ಥಾನಬದ್ಧತಾ ಆದೇಶವನ್ನು ರಾಜ್ಯ ಸರ್ಕಾರವು ಅಥವಾ ರಾಷ್ಟ್ರೀಯ ಭದ್ರತಾ ಅಧಿನಿಯಮದ ಅಡಿಯಲ್ಲಿನ ಯಾರೇ ಅಧಿಕಾರಿಯು ರಾಷ್ಟ್ರೀಯ ಭದ್ರತಾ ಅಧಿನಿಯಮ, 1980ರ (1980ರ ಕೇಂದ್ರಾಧಿನಿಯಮ 65) ಅಡಿಯಲ್ಲಿ ಹೊರಡಿಸತಕ್ಕದ್ದಲ್ಲ.

**18. ನಿರಸನ ಮತ್ತು ಉಳಿಸುವಿಕೆಗಳು:–** (1) ಕರ್ನಾಟಕ ಕಳ್ಳಭಟ್ಟಿವ್ಯಾಪಾರಿಗಳ, ಮಾದಕವಸ್ತು ಅಪರಾಧಿಗಳ, ಜೂಜುಕೋರರ, ಗೂಂಡಾಗಳ, ಅನೈತಿಕ ವ್ಯವಹಾರದ ಅಪರಾಧಿಗಳ ಮತ್ತು ಕೊಳಚೆ ಪ್ರದೇಶ ಕಬಳಿಸುವವರ ಅಪಾಯಕಾರಿ ಚಟುವಟಿಕೆಗಳ ಪ್ರತಿಬಂಧಕ ಅಧ್ಯಾದೇಶ, 1984 ನ್ನು (1984ರ ಕರ್ನಾಟಕ ಅಧ್ಯಾದೇಶ 16) ಈ ಮೂಲಕ ನಿರಸನಗೊಳಿಸಲಾಗಿದೆ.

(2) ಹಾಗೆ ನಿರಸಿತವಾಗಿದ್ದರೂ, ಸದರಿ ಅಧ್ಯಾದೇಶದ ಅಡಿಯಲ್ಲಿ ಮಾಡಲಾದ ಯಾವುದೇ ಕೃತ್ಯ ಅಥವಾ ಕೈಗೊಳ್ಳಲಾದ ಯಾವುದೇ ಕ್ರಮವನ್ನು ಈ ಅಧಿನಿಯಮದ ಅಡಿಯಲ್ಲಿ ಮಾಡಲಾದುದೆಂದು ಅಥವಾ ಕೈಗೊಳ್ಳಲಾದುದೆಂದು ಭಾವಿಸತಕ್ಕದ್ದು.

1. 1987ರ ಅಧಿನಿಯಮ 22ರ ಮೂಲಕ 20.1.1987ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.

The above translation of the Karnataka Prevention of Dangerous Activities of Bootleggers, Drug Offenders, Gamblers, Goondas, Immoral Traffic Offenders and Slum Grabbers Act, 1985 (Karnataka Act 12 of 1985) shall be the authoritative text in Kannada Language under section 5A of the Karnataka Official Language Act, 1963 (Karnataka Act 26 of 1963).

GOVERNOR OF KARNATAKA

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಜಿ.ಕೆ. ಬೋರೇಗೌಡ**

ಪಿ.ಆರ್. 1291

ಸರ್ಕಾರದ ಕಾರ್ಯದರ್ಶಿ,

ಸಂಸದೀಯ ವ್ಯವಹಾರಗಳು ಮತ್ತು ಶಾಸನ ರಚನೆ ಇಲಾಖೆ

**KARNATAKA LEGISLATIVE COUNCIL SECRETARIAT**

**Vidhana Soudha, Bangalore**

**NOTIFICATION**

**No. KLCS / ADM-1 / 17 / RIA / 2006, Bangalore, dated the 13th June, 2006**

In exercise of powers conferred by Section 28 of the Right to Information Act, 2005 (Central Act No. 22 of 2005), the Chairman, Karnataka Legislative Council hereby makes the following rules, namely :-

1. **Short title and commencement -** (1) These rules may be called the Karnataka Legislative Council Secretariat Right to Information Rules, 2006.

(2) They shall come into force on the date of their publication in the Official Gazette.

2. **Definitions -** In these rules, unless the context otherwise requires -

(a) 'Act' means the Right to Information Act, 2005,

(b) 'Section' means section of the Act ; and

(c) All other words and expressions used herein but not defined in the Act shall have the meanings assigned to them in the Act.

3. Any person who desires to obtain information under sub-section (1) of section 6 shall make an application in writing in Form-A or in any other format as far as possible containing the particulars specified in Form A to the State Public Information Officer or the State Assistant Public Information Officer, as the case may be, along with a fee of rupees ten by way of cash against proper receipt or by demand draft or banker's cheque payable to the Under Secretary (Accounts), Karnataka Legislative Council Secretariat.

4. For providing information under sub-section (1) of section 7, the fee shall be charged by way of cash against proper receipt or by demand draft or bankers cheque payable to the Under Secretary (Accounts), Karnataka Legislative Council Secretariat at the following rates :-

(a) Rupees two for each page (in A-4 or A-3 size paper) created or copied ;

(b) actual charge or cost price of a copy in larger size paper,

(c) actual cost or price of samples or models ; and

(d) for inspection of records, no fee for the first hour ; and a fee of rupees twenty for each subsequent hour (or fraction thereof).

5. For providing information under sub-section (5) of section 7, the fee shall be charged by way of cash against proper receipt or by demand draft or banker's cheque payable to the Under Secretary (Accounts), Karnataka Legislative Council Secretariat at the following rates :-

(a) For information provided in diskette or floppy rupees fifty per diskette or floppy ; and

(b) For information provided in printed form at the price fixed for such publication or rupees two page of photocopy for extracts from the publications.

By the Order and in the name of the Chairman

**K. JAYASHANKARAMURTHY**

Secretary,

Karnataka Legislative Council Secretariat.

**FORM - A**

**( see rule 3 (1) )**

**APPLICATION FORM FOR OBTAINING INFORMATION**

The State Public Information Officer /

The State Assistant Public Information Officer,

Karnataka Legislative Council Secretariat,

P.B. No. 5074, Vidhana Soudha,

Bangalore - 560001.

1. Name of the applicant :

2. Full Address :

3. Brief particulars of Information required :

4. I hereby state that the information sought for is not covered under the categories which are exempted from disclosure of information under section 8 or under section 9 of the Right to Information Act, 2005 and to the best of my knowledge it pertains to your Secretariat.

5. (1) I hereby state that the prescribed application fee of Rs. (Rupees ..............................................................) has been paid vide receipt No. dated ............................ in the Accounts Branch of your Secretariat.

(2) I state that I have paid the fee for the information desired in your Accounts Branch vide receipt No. ................. dated ................ / I am enclosing herewith a demand draft / pay order No......................... dated ................ drawn in favour of the Under Secretary (Accounts), Karnataka Legislative Council Secretariat towards the fee payable.

(3) I belong to the BPL family, A Xerox copy of my BPL card / certificate is enlosed herewith.

Place: Signature of the applicant :

Date : e-mail address, if any :

Telephone No. Office :

Residence :

NB: A person belonging to B.P.L. family need not pay any type of fees.

P.R. 1160

**ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಸಚಿವಾಲಯ**

**ಅಧಿಸೂಚನೆ**

**ಸಂಖ್ಯೆ: ಅಪಜೀ 11 ಎಫ್‌ಡಬ್ಲ್ಯೂಎಲ್ 2003, ಬೆಂಗಳೂರು, ದಿನಾಂಕ: 17ನೇ ಜೂನ್ 2006.**

ವನ್ಯಜೀವಿ (ಸಂರಕ್ಷಣೆ) ತಿದ್ದುಪಡಿ ಕಾಯ್ದೆ 2002 ರ ಸೆಕ್ಷನ್ 6ರ ಸಬ್–ಸೆಕ್ಷನ್ (1) ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ರಾಜ್ಯ ಸರ್ಕಾರವು ಈ ಕೆಳಕಂಡ ಸದಸ್ಯರುಗಳನ್ನೊಳಗೊಂಡ ವನ್ಯಜೀವಿಗಾಗಿ ರಾಜ್ಯ ಮಂಡಳಿಯನ್ನು ರಚಿಸಲಾಗಿದೆ.

(ಅ) ಮುಖ್ಯಮಂತ್ರಿಗಳು — ಅಧ್ಯಕ್ಷರು

(ಆ) ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಸಚಿವರು. — ಉಪಾಧ್ಯಕ್ಷರು

(ಇ) ಈ ಕೆಳಕಂಡ ರಾಜ್ಯ ವಿಧಾನಸಭಾ ಸದಸ್ಯರುಗಳು — ಸದಸ್ಯರುಗಳು

1) ಶ್ರೀ ಜಿ.ಟಿ. ದೇವೇಗೌಡ, ವಿಧಾನಸಭಾ ಸದಸ್ಯರು.

2) ಶ್ರೀ ಹೆಚ್.ಎಸ್. ಮಹದೇವಪ್ರಸಾದ್, ವಿಧಾನಸಭಾ ಸದಸ್ಯರು.

3) ಶ್ರೀ ಎಸ್. ಬಾಲರಾಜ್, ವಿಧಾನಸಭಾ ಸದಸ್ಯರು.

ಡಿ) ಸರ್ಕಾರೇತರ ಸಂಸ್ಥೆಗಳ ಈ ಕೆಳಕಂಡ ಮುಖ್ಯಸ್ಥರುಗಳು: — ಸದಸ್ಯರುಗಳು

1)ಕಂಪ್ಯಾಶನ್ ಅನ್‌ಲಿಮಿಟೆಡ್ ಪ್ಲಸ್ ಆ್ಯಕ್ಷನ್, ಬೆಂಗಳೂರು. (CUPA)

2)ಕೂರ್ಗ್ ವೈಲ್ಡ್‌ಲೈಫ್ ಸೊಸೈಟಿ

3)ಪೀಪಲ್ಸ್ ಫಾರ್ ಅನಿಮಲ್ (PEA) ಬೆಂಗಳೂರು

(ಉ) ಈ ಕೆಳಕಂಡ ಪ್ರತಿಷ್ಠಿತ ಸಂರಕ್ಷಣಾವಾದಿಗಳು, ಪರಿಸರವಾದಿಗಳು ಮತ್ತು ಜೀವಿ ಪರಿಸರವಾದಿಗಳು:– — ಸದಸ್ಯರುಗಳು

**ಶ್ರೀಯುತರುಗಳು:**

| | |
|---|---|
| 1 | ಕೆ.ಎನ್. ಚೆಂಗಪ್ಪ, ಪೊನ್ನಮ್‌ಪೇಟ್, ಕೊಡಗು. |
| 2 | ಎಸ್.ಎ.ಹುಸೇನ್, ಕಾರ್ಕಳ |
| 3 | ಕ್ಯಾ: ಗೋಪಿ, ಬೆಂಗಳೂರು |
| 4 | ಡಾ: ಪ್ರಸಾದ್ |
| 5 | ನವನಾತ್ ಕೃಷ್ಣ, ಬೆಂಗಳೂರು |
| 6 | ಸಂಜಯ್ ಗುಬ್ಬಿ, ತುಮಕೂರು |

| | |
|---|---|
| 7 | ಮೆ: ನಂದಿನಿ ಅಳ್ವ, ಬೆಂಗಳೂರು. |
| 8 | ಪ್ರೊ: ಟಿ.ಬಿ.ಬಿ.ಎಸ್.ವಿ. ರಾಮಣಯ್ಯ (ಎಸ್.ಸಿ.) ಮೈಸೂರು. |
| 9 | ಸುಕುಮಾರ್.ಆರ್. IIಎಸ್ಸಿ, ಬೆಂಗಳೂರು. |
| 10 | ಮೆ: ವೀಣಾ.ಪಿ.ಬಿ. ಹುಣಸೂರು (ಎಸ್.ಟಿ) |

| | | |
|---|---|---|
| (ಊ) | ಸರ್ಕಾರದ ಪ್ರಧಾನ ಕಾರ್ಯದರ್ಶಿ, ಕರ್ನಾಟಕ ಸರ್ಕಾರ, ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆ, ಬೆಂಗಳೂರು. | ಸದಸ್ಯರು |
| (ಋ) | ಪ್ರಧಾನ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿ, ಕರ್ನಾಟಕ, ಬೆಂಗಳೂರು | ಸದಸ್ಯರು |
| (ಎ) | ಸರ್ಕಾರದ ಪ್ರಧಾನ ಕಾರ್ಯದರ್ಶಿ/ಸರ್ಕಾರದ ಕಾರ್ಯದರ್ಶಿ, ಕರ್ನಾಟಕ ಸರ್ಕಾರ, ಸಮಾಜ ಕಲ್ಯಾಣ ಇಲಾಖೆ, ಬೆಂಗಳೂರು. | ಸದಸ್ಯರು |
| (ಏ) | ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ರಾಜ್ಯ ಪ್ರವಾಸೋದ್ಯಮ ಅಭಿವೃದ್ಧಿ ನಿಗಮ ನಿಯಮಿತ, ಬೆಂಗಳೂರು. | ಸದಸ್ಯರು |
| (ಒ) | ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್, ಫಾರೆಸ್ಟ್‌ಸೆಲ್, ಬೆಂಗಳೂರು. | ಸದಸ್ಯರು |
| (ಓ) | ಆರ್ಮ್‌ಡ್ ಫೋರ್ಸ್‌ಸ್ ಪ್ರತಿನಿಧಿ ಕೇಂದ್ರ ಸರ್ಕಾರದಿಂದ ನಾಮ ನಿರ್ದೇಶಿತ ಬ್ರಿಗೇಡಿಯರ್ ರ್‍ಯಾಂಕ್‌ಗೆ ಕಡಿಮೆಯಿಲ್ಲದ. | ಸದಸ್ಯರು |
| (ಔ) | ನಿರ್ದೇಶಕರು, ಪಶುಸಂಗೋಪನೆ ಮತ್ತು ಪಶುವೈದ್ಯ ಸೇವೆಗಳ ನಿರ್ದೇಶನಾಲಯ, ಬೆಂಗಳೂರು. | ಸದಸ್ಯರು |
| (ಅಂ) | ನಿರ್ದೇಶಕರು, ಮೀನುಗಾರಿಕೆ ಇಲಾಖೆ, ಬೆಂಗಳೂರು. | ಸದಸ್ಯರು |
| (ಅ:) | ನಿರ್ದೇಶಕರು, ವನ್ಯಜೀವಿ ಪರಿರಕ್ಷಣೆ, ನವದೆಹಲಿಯಿಂದ ನಾಮ ನಿರ್ದೇಶಿತ ಅಧಿಕಾರಿ. | ಸದಸ್ಯರು |
| (ಕ) | ನಿರ್ದೇಶಕರು, ಭಾರತೀಯ ವನ್ಯಜೀವಿ ಸಂಸ್ಥೆ, ಡೆಹರಾಡೂನ್. ಇವರ ಪ್ರತಿನಿಧಿ. | ಸದಸ್ಯರು |
| (ಖ) | ನಿರ್ದೇಶಕರು, ಭಾರತೀಯ ಪ್ರಾಣಿ ಸಮೀಕ್ಷೆ ಕೇಂದ್ರ, ಕಲ್ಕತ್ತಾ. ಇವರ ಪ್ರತಿನಿಧಿ. | ಸದಸ್ಯರು |
| (ಗ) | ನಿರ್ದೇಶಕರು, ಭಾರತೀಯ ಸಸ್ಯವಿಜ್ಞಾನ, ಕಲ್ಕತ್ತಾ. ಇವರ ಪ್ರತಿನಿಧಿ. | ಸದಸ್ಯರು |
| (ಘ) | ಪ್ರಧಾನ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿ (ವನ್ಯಜೀವಿ) ಮತ್ತು ವೈಲ್ಡ್‌ಲೈಫ್ ವಾರ್ಡನ್, ಕರ್ನಾಟಕ, ಬೆಂಗಳೂರು. | ಸದಸ್ಯ ಕಾರ್ಯದರ್ಶಿ |

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1220

**ಹೆಚ್.ಎಂ.ಮಲ್ಲಿಕಾರ್ಜುನಸ್ವಾಮಿ**

ಸರ್ಕಾರದ ಅಧೀನ ಕಾರ್ಯದರ್ಶಿ,

ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆ.

## ಸಹಕಾರ ಸಚಿವಾಲಯ

## ಅಧಿಸೂಚನೆ

**ಸಂಖ್ಯೆ: ಸಿಎಂಡಬ್ಲ್ಯೂ 57 ಸಿಎಸ್ಎಸ್ 2006, ಬೆಂಗಳೂರು, ದಿನಾಂಕ: 24ನೇ ಏಪ್ರಿಲ್ 2006.**

ಈ ಹಿಂದೆ ಸರ್ಕಾರದ ಅಧಿಸೂಚನೆ ಸಂಖ್ಯೆ ಸಿಎಂಡಬ್ಲ್ಯೂ 57 ಸಿಎಸ್ಎಸ್:2006 ದಿನಾಂಕ: 22–3–2006 ರಲ್ಲಿ ಧಾರವಾಡ ಜಿಲ್ಲೆ ಕುಂದಗೋಳ ತಾಲ್ಲೂಕಿನ ಸಂಶಿ ವ್ಯವಸಾಯ ಸೇವಾ ಸಹಕಾರ ಬ್ಯಾಂಕ್ ನಿ ಇದರ ಆಡಳಿತ ಮಂಡಳಿಗೆ ಮಾಡಿದ್ದ ಎಲ್ಲಾ ನಾಮನಿರ್ದೇಶನಗಳನ್ನು ಈ ಕೂಡಲೇ ಜಾರಿಗೆ ಬರುವಂತೆ ರದ್ದುಪಡಿಸಲಾಗಿದೆ.

ಇವರ ಸ್ಥಾನದಲ್ಲಿ ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959 (1959ರ ಕರ್ನಾಟಕ ಅಧಿನಿಯಮ ಸಂಖ್ಯೆ 11)ರ ಕಲಂ 29ರ ಉಪ ಕಲಂ(1)ರ ಮೇರೆಗೆ ದತ್ತವಾದ ಅಧಿಕಾರಗಳನ್ನು ಚಲಾಯಿಸಿ, ಕರ್ನಾಟಕ ಸರ್ಕಾರವು ಈ ಕೆಳಕಂಡ ವ್ಯಕ್ತಿಗಳನ್ನು ಧಾರವಾಡ ಜಿಲ್ಲೆ ಕುಂದಗೋಳ ತಾಲ್ಲೂಕಿನ ಸಂಶಿ, ವ್ಯವಸಾಯ ಸೇವಾ ಸಹಕಾರ ಬ್ಯಾಂಕು ನಿ ಇದರ ಆಡಳಿತ ಮಂಡಳಿಗೆ ಸದಸ್ಯರುಗಳನ್ನಾಗಿ ಈ ಕೂಡಲೇ ಜಾರಿಗೆ ಬರುವಂತೆ ನಾಮನಿರ್ದೇಶನ ಮಾಡಿದೆ. ಹೀಗೆ ನಾಮನಿರ್ದೇಶನಗೊಂಡ ಸದಸ್ಯರ ಪದಾವಧಿಯು ಚುನಾಯಿತ ಸಮಿತಿಯ ಪದಾವಧಿಯು ಮುಕ್ತಾಯವಾಗುವವರೆಗೆ ಅಥವಾ ಸರ್ಕಾರದ ಮುಂದಿನ ಆದೇಶದವರೆಗೆ ಇವುಗಳಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ಜಾರಿಯಲ್ಲಿರುತ್ತದೆ.

1. ಶ್ರೀ ಯಲ್ಲಪ್ಪಗೌಡ ಗುರನಗೌಡ ಪಾಟೀಲ್
2. ಶ್ರೀಮತಿ ಶಾಂತವ್ವ ಹನುಮಂತಪ್ಪ ಘೋರ್ಪಡೆ
3. ಶ್ರೀ ಮರಿಯಪ್ಪ ಪಕ್ಕೀರಪ್ಪ ಕಲಾರಿ

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1221

**ಆರ್.ಎಸ್. ಹುಬ್ಬಾಚಾರಿ**

ವಿಶೇಷ ಕರ್ತವ್ಯಾಧಿಕಾರಿ, ಸಹಕಾರ ಇಲಾಖೆ.

ಅಧಿಸೂಚನೆ

ಸಂಖ್ಯೆ: ಸಿಎಂಡಬ್ಲ್ಯೂ 161 ಸಿಎಸ್‌ಎಸ್ 2006, ಬೆಂಗಳೂರು, ದಿನಾಂಕ: 28ನೇ ಮಾರ್ಚ್ 2006.

ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959 (1959ರ ಕರ್ನಾಟಕ ಅಧಿನಿಯಮ ಸಂಖ್ಯೆ 11) ರ ಕಲಂ 29ರ ಉಪ ಕಲಂ(1)ರ ಮೇರೆಗೆ ದತ್ತವಾದ ಅಧಿಕಾರಗಳನ್ನು ಚಲಾಯಿಸಿ, ಕರ್ನಾಟಕ ಸರ್ಕಾರವು ಈ ಕೆಳಕಂಡ ವ್ಯಕ್ತಿಗಳನ್ನು ಹಾವೇರಿ ಜಿಲ್ಲೆ ಮತ್ತು ತಾಲ್ಲೂಕಿನ ಹಂದಿಗನೂರು ಗ್ರಾಮದ ವ್ಯವಸಾಯ ಸೇವಾ ಸಹಕಾರ ಬ್ಯಾಂಕ್ ನಿ, ಹಂದಿಗನೂರು ಇದರ ಆಡಳಿತ ಮಂಡಳಿಗೆ ಸದಸ್ಯರುಗಳನ್ನಾಗಿ ಈ ಕೂಡಲೇ ಜಾರಿಗೆ ಬರುವಂತೆ ಮತ್ತು ಮುಂದಿನ ಆದೇಶದವರೆವಿಗೂ ನಾಮನಿರ್ದೇಶನ ಮಾಡಿದೆ.

1. ಶ್ರೀ ಜಯದೇವಯ್ಯ ಸಂಗಯ್ಯ ಹಿರೇಮಠ ಸಾ: ಮೇಲ್ಮೂರಿ
2. ಶ್ರೀ ಭೀಮಪ್ಪ ಬಸಪ್ಪ ತಳವಾರ, ಸಾ: ಮೇಲ್ಮೂರಿ
3. ಶ್ರೀಮತಿ ಸಲಿಮಬಿ ಅಲ್ಲಾಸಾಬ್ ಸುಂಕದ ಸಾ: ಹಂದಿಗನೂರು

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1235

**ಆರ್.ಎಸ್. ಹುಚ್ಚಾಚಾರಿ**

ವಿಶೇಷ ಕರ್ತವ್ಯಾಧಿಕಾರಿ, ಸಹಕಾರ ಇಲಾಖೆ.

**ಅಧಿಸೂಚನೆ**

**ಸಂಖ್ಯೆ: ಸಿಎಂಡಬ್ಲ್ಯೂ 217 ಸಿಎಸ್‌ಎಸ್ 2006, ಬೆಂಗಳೂರು, ದಿನಾಂಕ: 6ನೇ ಮೇ 2006.**

ಈ ಹಿಂದೆ ಸರ್ಕಾರದ ಅಧಿಸೂಚನೆ ಸಂಖ್ಯೆ ಸಿಎಂಡಬ್ಲ್ಯೂ 217 ಸಿಎಸ್‌ಎಸ್:2006 ದಿನಾಂಕ: 6–4–2006 ರಲ್ಲಿ ಮಂಡ್ಯ ಜಿಲ್ಲೆ ಶ್ರೀರಂಗಪಟ್ಟಣ ತಾಲ್ಲೂಕಿನ ಬಲ್ಲೇನಹಳ್ಳಿ ವ್ಯವಸಾಯ ಸೇವಾ ಸಹಕಾರ ಬ್ಯಾಂಕ್ ನಿ. ಬಲ್ಲೇನಹಳ್ಳಿ ಇದರ ಆಡಳಿತ ಮಂಡಳಿಗೆ ಮಾಡಿದ್ದ ಶ್ರೀಮತಿ ಮಂಜುಳ ಕೋಂ ಅಣ್ಣೇಗೌಡ, ಬಲ್ಲೇನಹಳ್ಳಿ, ಇವರ ನಾಮನಿರ್ದೇಶನವನ್ನು ಈ ಕೂಡಲೇ ಜಾರಿಗೆ ಬರುವಂತೆ ರದ್ದುಪಡಿಸಿದೆ.

ಮುಂದುವರೆದು, ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959 (1959ರ ಕರ್ನಾಟಕ ಅಧಿನಿಯಮ ಸಂಖ್ಯೆ 11)ರ ಕಲಂ 29ರ ಉಪ ಕಲಂ(1)ರ ಮೇರೆಗೆ ದತ್ತವಾದ ಅಧಿಕಾರಗಳನ್ನು ಚಲಾಯಿಸಿ, ಕರ್ನಾಟಕ ಸರ್ಕಾರವು ಶ್ರೀಮತಿ ರಾಧಮ್ಮ ಕೋಂ ಮರಿಲಿಂಗಯ್ಯ, ಬಲ್ಲೇನಹಳ್ಳಿ, ಶ್ರೀರಂಗಪಟ್ಟಣ ತಾಲ್ಲೂಕು ಇವರನ್ನು ಬಲ್ಲೇನಹಳ್ಳಿ ವ್ಯವಸಾಯ ಸೇವಾ ಸಹಕಾರ ಬ್ಯಾಂಕ್ ನಿ. ಬಲ್ಲೇನಹಳ್ಳಿ ಇದರ ಆಡಳಿತ ಮಂಡಳಿಗೆ ಸದಸ್ಯರನ್ನಾಗಿ ಈ ಕೂಡಲೇ ಜಾರಿಗೆ ಬರುವಂತೆ ಮತ್ತು ಮುಂದಿನ ಆದೇಶದವರೆವಿಗೂ ನಾಮನಿದೇಶನ ಮಾಡಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1246

**ಆರ್.ಎಸ್. ಹುಚ್ಚಾಚಾರಿ**

ವಿಶೇಷ ಕರ್ತವ್ಯಾಧಿಕಾರಿ, ಸಹಕಾರ ಇಲಾಖೆ.

**ಅಧಿಸೂಚನೆ**

**ಸಂಖ್ಯೆ: ಸಿಎಂಡಬ್ಲ್ಯೂ 37 ಸಿಎಸ್‌ಎಸ್ 2006, ಬೆಂಗಳೂರು, ದಿನಾಂಕ: 20ನೇ ಮಾರ್ಚ್ 2006.**

ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959 (1959ರ ಕರ್ನಾಟಕ ಅಧಿನಿಯಮ ಸಂಖ್ಯೆ 11)ರ ಕಲಂ 29ರ ಉಪ ಕಲಂ (1)ರ ಮೇರೆಗೆ ದತ್ತವಾದ ಅಧಿಕಾರಗಳನ್ನು ಚಲಾಯಿಸಿ, ಕರ್ನಾಟಕ ಸರ್ಕಾರವು ಈ ಕೆಳಕಂಡ ವ್ಯಕ್ತಿಗಳನ್ನು ಹಾಸನ ಜಿಲ್ಲೆ ಸಕಲೇಶಪುರ ತಾಲ್ಲೂಕಿನ ವಿವಿಧ 09 ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಬ್ಯಾಂಕುಗಳ ಆಡಳಿತ ಮಂಡಳಿಗೆ ಸದಸ್ಯರುಗಳನ್ನಾಗಿ ಈ ಕೂಡಲೇ ಜಾರಿಗೆ ಬರುವಂತೆ ಮತ್ತು ಮುಂದಿನ ಆದೇಶದವರೆವಿಗೂ ನಾಮನಿರ್ದೇಶನ ಮಾಡಿದೆ.

**ಹಾನ್‌ಬಾಳ್ ಕೃಷಿ ಪತ್ತಿನ ಸಹಕಾರ ಬ್ಯಾಂಕು**

1. ಶ್ರೀ ಎಂ.ಎಸ್. ಯುವರಾಜೇಗೌಡ ಬಿನ್ ಶಿವಪ್ಪ, ಮಾವಿನಹಳ್ಳಿ ಗ್ರಾಮ, ಕಾಮನಹಳ್ಳಿ ಅಂಚೆ, ಸಕಲೇಶಪುರ ತಾಲ್ಲೂಕು, ಹಾಸನ ಜಿಲ್ಲೆ.
2. ಶ್ರೀಮತಿ ಲಿಲ್ಲಿ ಬೋಬಿ ಜಾನ್ ಕೋಂ ಬೋಬಿಜಾನ್, ಇಂದಿರಾನಗರ, ಹಾನುಬಾಳು ಅಂಚೆ, ಸಕಲೇಶಪುರ ತಾಲ್ಲೂಕು, ಹಾಸನ ಜಿಲ್ಲೆ.
3. ಶ್ರೀ ಸಣ್ಣಯ್ಯ ಬಿನ್ ಭೈರಯ್ಯ, ಹುರುಡಿ ಗ್ರಾಮ ಮತ್ತು ಅಂಚೆ, ಸಕಲೇಶಪುರ ತಾಲ್ಲೂಕು, ಹಾಸನ ಜಿಲ್ಲೆ.

**ಯಸಳೂರು ಕೃಷಿ ಪತ್ತಿನ ಸಹಕಾರ ಬ್ಯಾಂಕು**

1. ಶ್ರೀಮತಿ ಪಾದ್ಮಾಕ್ಷಿ ಕೋಂ ವಿಜಯ್‌ಕುಮಾರ್, ಯಸಳೂರು ಗ್ರಾಮ ಮತ್ತು ಅಂಚೆ, ಸಕಲೇಶಪುರ ತಾಲ್ಲೂಕು, ಹಾಸನ ಜಿಲ್ಲೆ.
2. ಶ್ರೀ ಎಜಾಜ್ ಅಹ್ಮದ್ ಬಿನ್ ಮಹ್ಮದ್ ಜಮೀಲ್, ಯಸಳೂರು ಗ್ರಾಮ ಮತ್ತು ಅಂಚೆ, ಸಕಲೇಶಪುರ ತಾಲ್ಲೂಕು, ಹಾಸನ ಜಿಲ್ಲೆ.
3. ಶ್ರೀ ಮಂಜಯ್ಯ ಬಿನ್ ಚನ್ನವೀರಯ್ಯ, ಯಸಳೂರು ಗ್ರಾಮ ಮತ್ತು ಅಂಚೆ, ಸಕಲೇಶಪುರ ತಾಲ್ಲುಕು, ಹಾಸನ ಜಿಲ್ಲೆ.

**ಹೊಸೂರು ಕೃಷಿ ಪತ್ತಿನ ಸಹಕಾರ ಬ್ಯಾಂಕು**

1. ಶ್ರೀ ಪುಟ್ಟಸ್ವಾಮಿಗೌಡ ಬಿನ್ ಸುಬ್ಬೇಗೌಡ, ಹೊಸಕೋಟೆ ಗ್ರಾಮ, ಹೊಸೂರು ಅಂಚೆ, ಯಸಳೂರು ಹೋಬಳಿ, ಸಕಲೇಶಪುರ ತಾಲ್ಲೂಕು, ಹಾಸನ ಜಿಲ್ಲೆ.
2. ಶ್ರೀಮತಿ ವೇದಾವತಿ ಕೋಂ ರಾಜಶೇಖರ್ ಚಿನ್ನಳ್ಳಿ ಗ್ರಾಮ, ಈಚಲು ಬೀಡು ಅಂಚೆ, ಯಸಳೂರು ಹೋಬಳಿ, ಸಕಲೇಶಪುರ ತಾಲ್ಲೂಕು, ಹಾಸನ ಜಿಲ್ಲೆ.
3. ಶ್ರೀಮತಿ ಗಿರಿಜಾ ಕೋಂ ಆನಂದ ಕಳಲೆ ಎಸ್ಟೇಟ್, ಕಳಲೆ ಅಂಚೆ, ಯಸಳೂರು ಹೋಬಳಿ, ಸಕಲೇಶಪುರ ತಾಲ್ಲೂಕು, ಹಾಸನ ಜಿಲ್ಲೆ.

**ಉಚ್ಚಂಗಿ ಕೃಷಿ ಪತ್ತಿನ ಸಹಕಾರ ಬ್ಯಾಂಕು**

1. ಶ್ರೀ ಹೆಚ್.ಎಂ. ಶಿವಣ್ಣ ಬಿನ್ ಮಲ್ಲೇಗೌಡ, ಉಚ್ಚಂಗಿ ಗ್ರಾಮ ಮತ್ತು ಅಂಚೆ, ಯಸಳೂರು ಹೋಬಳಿ, ಸಕಲೇಶಪುರ ತಾಲ್ಲೂಕು, ಹಾಸನ ಜಿಲ್ಲೆ.

2. ಶ್ರೀಮತಿ ತಂಗ್ಯಮ್ಮ ಕೋಂ ಚನ್ನೇಗೌಡ, ಉಚ್ಚಂಗಿ ಗ್ರಾಮ ಮತ್ತು ಅಂಚೆ, ಯಸಳೂರು ಹೋಬಳಿ, ಸಕಲೇಶಪುರ ತಾಲ್ಲೂಕು, ಹಾಸನ ಜಿಲ್ಲೆ.
3. ಶ್ರೀ ಎಲ್.ಕೆ. ರಮೇಶ್ ಬಿನ್ ಕರಿಯಯ್ಯ, ಲಕ್ಕುಂದ ಗ್ರಾಮ, ಉಚ್ಚಂಗಿ ಅಂಚೆ, ಯಸಳೂರು ಹೋಬಳಿ, ಸಕಲೇಶಪುರ ತಾಲ್ಲೂಕು, ಹಾಸನ ಜಿಲ್ಲೆ.

**ಐಗೂರು ಕೃಷಿ ಪತ್ತಿನ ಸಹಕಾರ ಬ್ಯಾಂಕು**

1. ಶ್ರೀಮತಿ ರಾಧಾ ಕೋಂ ಕುಮಾರ್, ಹಳ್ಳಿಗದ್ದೆ ಗ್ರಾಮ, ಐಗೂರು ಅಂಚೆ, ಯಸಳೂರು ಹೋಬಳಿ, ಸಕಲೇಶಪುರ ತಾಲ್ಲೂಕು, ಹಾಸನ ಜಿಲ್ಲೆ.
2. ಶ್ರೀ ಚಂದ್ರೋಜಿ ಬಿನ್ ಸುಬ್ಬೋಜಿ, ಸರಗಳ್ಳಿ ಗ್ರಾಮ, ಐಗೂರು ಅಂಚೆ, ಯಸಳೂರು ಹೋಬಳಿ, ಸಕಲೇಶಪುರ ತಾಲ್ಲೂಕು, ಹಾಸನ ಜಿಲ್ಲೆ.
3. ಶ್ರೀ ಚೆನ್ನಕೇಶವ ಬಿನ್ ಸಿದ್ಧಯ್ಯ, ಚಿಕ್ಕಲೂರು ಗ್ರಾಮ, ಕುಂಬ್ರಳ್ಳಿ ಅಂಚೆ, ಐಗೂರು ಅಂಚೆ, ಯಸಳೂರು ಹೋಬಳಿ, ಸಕಲೇಶಪುರ ತಾಲ್ಲೂಕು, ಹಾಸನ ಜಿಲ್ಲೆ.

**ಬಾಳ್ಳುಪೇಟೆ ಕೃಷಿ ಪತ್ತಿನ ಸಹಕಾರ ಬ್ಯಾಂಕು**

1. ಶ್ರೀಮತಿ ಬಿ.ಪಿ. ಲೀಲಾ ಕೋಂ ಜಿ. ಪ್ರಕಾಶ್, ಬಾಳ್ಳುಪೇಟೆ ಗ್ರಾಮ ಮತ್ತು ಅಂಚೆ, ಸಕಲೇಶಪುರ ತಾಲ್ಲೂಕು, ಹಾಸನ ಜಿಲ್ಲೆ.
2. ಶ್ರೀ ಶಿವಪ್ಪ ಬಿನ್ ಈರಯ್ಯ, ಬಾಳುಗೋಡು ಗ್ರಾಮ, ಬಾಳ್ಳುಪೇಟೆ ಅಂಚೆ, ಸಕಲೇಶಪುರ ತಾಲ್ಲೂಕು, ಹಾಸನ ಜಿಲ್ಲೆ.
3. ಗಿರಿಚೇಂದ್ರ ಬಿನ್ ದೊಡ್ಡಬಸವಯ್ಯ, ಅಂಬೇಡ್ಕರ್ ನಗರ, ಬಾಳ್ಳುಪೇಟೆ ಅಂಚೆ, ಸಕಲೇಶಪುರ ತಾಲ್ಲೂಕು, ಹಾಸನ ಜಿಲ್ಲೆ.

**ಹೆತ್ತೂರು ಕೃಷಿ ಪತ್ತಿನ ಸಹಕಾರ ಬ್ಯಾಂಕು**

1. ಶ್ರೀ ಹೆಚ್.ಪಿ. ರವಿಕುಮಾರ್ ಬಿನ್ ಪುಟ್ಟಸ್ವಾಮಿ, ಹೆತ್ತೂರು ಗ್ರಾಮ ಮತ್ತು ಅಂಚೆ, ಸಕಲೇಶಪುರ ತಾಲ್ಲೂಕು, ಹಾಸನ ಜಿಲ್ಲೆ.
2. ಶ್ರೀಮತಿ ಸುಮಿತ್ರ ಕೋಂ ಪರಮೇಶ್, ಕರಕಳ್ಳಿ ಗ್ರಾಮ, ಹೆತ್ತೂರು ಅಂಚೆ, ಸಕಲೇಶಪುರ ತಾಲ್ಲೂಕು, ಹಾಸನ ಜಿಲ್ಲೆ.
3. ಶ್ರೀ ರೇವಯ್ಯ ಬಿನ್ ಕರಿಯಯ್ಯ, ಹಿರಿಯೂರು ಗ್ರಾಮ, ವಳಲಳ್ಳಿ ಅಂಚೆ, ಸಕಲೇಶಪುರ ತಾಲ್ಲೂಕು, ಹಾಸನ ಜಿಲ್ಲೆ.

**ನಿಡಿಗೆರೆ ಕೃಷಿ ಪತ್ತಿನ ಸಹಕಾರ ಬ್ಯಾಂಕು**

1. ಶ್ರೀ ಎನ್.ಆರ್. ಪರಮೇಶ್ ಬಿನ್ ರಾಮೇಗೌಡ, ನಲ್ಲುಲ್ಲಿ ಗ್ರಾಮ, ಶುಕ್ರವಾರಸಂತೆ ಅಂಚೆ, ಕಸಬಾ ಹೋಬಳಿ, ಸಕಲೇಶಪುರ ತಾಲ್ಲೂಕು, ಹಾಸನ ಜಿಲ್ಲೆ.
2. ಶ್ರೀಮತಿ ಲಕ್ಷ್ಮೀದೇವಿ ಕೋಂ ಜೆ.ಇ. ಚಂದ್ರಶೇಖರ್, ಜಾನೇಕೆರೆ ಗ್ರಾಮ, ಅರೆಕೆರೆ ಅಂಚೆ, ಕಸಬಾ ಹೋಬಳಿ, ಸಕಲೇಶಪುರ ತಾಲ್ಲೂಕು, ಹಾಸನ ಜಿಲ್ಲೆ.
3. ಶ್ರೀ ಕೇಶವಮೂರ್ತಿ ಬಿನ್ ಚನ್ನಯ್ಯ, ನಿಡಿಗೆರೆ ಗ್ರಾಮ, ಶುಕ್ರವಾರಸಂತೆ ಅಂಚೆ, ಸಕಲೇಶಪುರ ತಾಲ್ಲೂಕು, ಹಾಸನ ಜಿಲ್ಲೆ.

**ಹೊಂಗಡಹಳ್ಳ ಕೃಷಿ ಪತ್ತಿನ ಸಹಕಾರ ಬ್ಯಾಂಕು**

1. ಶ್ರೀ ಮೂಗಣ್ಣ ಬಿನ್ ಗೌಡೇಗೌಡ, ಕೂಂತನಮನೆ ಗ್ರಾಮ, ಅತ್ತಿಹಳ್ಳಿ ಅಂಚೆ, ಹೆತ್ತೂರು ಹೋಬಳಿ, ಸಕಲೇಶಪುರ ತಾಲ್ಲೂಕು, ಹಾಸನ ಜಿಲ್ಲೆ.
2. ಶ್ರೀಮತಿ ಶಶಿಕಲಾ ಕೋಂ ಸುಭಾಷ್, ಮಾಯಿನೂರು ಗ್ರಾಮ, ಅತ್ತಿಹಳ್ಳಿ ಅಂಚೆ, ಹೆತ್ತೂರು ಹೋಬಳಿ, ಸಕಲೇಶಪುರ ತಾಲ್ಲೂಕು, ಹಾಸನ ಜಿಲ್ಲೆ.
3. ಶ್ರೀ ಮೊಗಣ್ಣ ಬಿನ್ ಮಂಜಯ್ಯ, ಹೊಂಗಡಹಳ್ಳ ಗ್ರಾಮ ಮತ್ತು ಅಂಚೆ, ಹೆತ್ತೂರು ಹೋಬಳಿ, ಸಕಲೇಶಪುರ ತಾಲ್ಲೂಕು, ಹಾಸನ ಜಿಲ್ಲೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1176

**ಆರ್.ಎಸ್. ಹುಚ್ಚಾಚಾರಿ**

ವಿಶೇಷ ಕರ್ತವ್ಯಾಧಿಕಾರಿ, ಸಹಕಾರ ಇಲಾಖೆ.

**ಅಧಿಸೂಚನೆ**

**ಸಂಖ್ಯೆ: ಸಿಎಂಡಬ್ಲ್ಯೂ 239 ಸಿಎಸ್‌ಎಸ್ 2006, ಬೆಂಗಳೂರು, ದಿನಾಂಕ: 6ನೇ ಏಪ್ರಿಲ್ 2006.**

ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959 (1959ರ ಕರ್ನಾಟಕ ಅಧಿನಿಯಮ ಸಂಖ್ಯೆ 11)ರ ಕಲಂ 29ರ ಉಪ ಕಲಂ (1)ರ ಮೇರೆಗೆ ದತ್ತವಾದ ಅಧಿಕಾರಗಳನ್ನು ಚಲಾಯಿಸಿ, ಕರ್ನಾಟಕ ಸರ್ಕಾರವು ಈ ಕೆಳಕಂಡ ವ್ಯಕ್ತಿಗಳನ್ನು ದಾವಣಗೆರೆ ಜಿಲ್ಲೆ ಚನ್ನಗಿರಿ ತಾಲ್ಲೂಕಿನ 03 ವಿವಿಧ ವ್ಯವಸಾಯ ಸೇವಾ ಸಹಕಾರ ಸಂಘಗಳ ಆಡಳಿತ ಮಂಡಳಿಗೆ ಸದಸ್ಯರುಗಳನ್ನಾಗಿ ಈ ಕೂಡಲೇ ಜಾರಿಗೆ ಬರುವಂತೆ ಮತ್ತು ಮುಂದಿನ ಆದೇಶದವರೆವಿಗೂ ನಾಮನಿರ್ದೇಶನ ಮಾಡಿದೆ.

**ಚನ್ನಗಿರಿ ತಾಲ್ಲೂಕು ಹಿರೇಮಳಲಿ ವ್ಯವಸಾಯ ಸೇವಾ ಸಹಕಾರ ಸಂಘ ನಿ.**

1. ಶ್ರೀ ಓಂಕಾರಪ್ಪ ಬಿನ್ ಗುಂಡಿಮಠ ರಂಗಪ್ಪ, ಚನ್ನೇಶಪುರ ಗ್ರಾಮ, ಚನ್ನೇಶಪುರ ಅಂಚೆ, ಚನ್ನಗಿರಿ ತಾಲ್ಲೂಕು.
2. ಶ್ರೀ ಮಹದೇವಪ್ಪ ಬಿನ್ ಹನುಮಂತಪ್ಪ, ಮಾವಿನಕಟ್ಟೆ ಗ್ರಾಮ, ಚನ್ನೇಶಪುರ ಅಂಚೆ, ಚನ್ನಗಿರಿ ತಾಲ್ಲೂಕು
3. ಶ್ರೀಮತಿ ರತ್ನಮ್ಮ ಕೋಂ ನಾಗೇಂದ್ರಪ್ಪ, ಹಿರೇಮಳಲಿ ಗ್ರಾಮ, ಹಿರೇಮಳಲಿ ಅಂಚೆ, ಚನ್ನಗಿರಿ ತಾಲ್ಲೂಕು.

**ಚನ್ನಗಿರಿ ತಾಲ್ಲೂಕು ಪಾಂಡೋಮಟ್ಟಿ ವ್ಯವಸಾಯ ಸೇವಾ ಸಹಕಾರ ಸಂಘ ನಿ.**

1. ಶ್ರೀ ಪರಮೇಶ್ವರ ಬಿನ್ ಮಲ್ಲಪ್ಪ, ಪಾಂಡೋಮಟ್ಟಿ ಗ್ರಾಮ, ಪಾಂಡೋಮಟ್ಟಿ ಅಂಚೆ, ಚನ್ನಗಿರಿ ತಾಲ್ಲೂಕು
2. ಶ್ರೀ ಹಾಲೇಶಪ್ಪ ಬಿನ್ ಮಹದೇವಪ್ಪ, ಪಾಂಡೋಮಟ್ಟಿ ಗ್ರಾಮ, ಪಾಂಡೋಮಟ್ಟಿ, ಅಂಚೆ, ಚನ್ನಗಿರಿ ತಾಲ್ಲೂಕು
3. ಶ್ರೀಮತಿ ಜಯಮ್ಮ ಕೋಂ ತಿರುಮಲಬೋವಿ ಪಾಂಡೋಮಟ್ಟಿ ಗ್ರಾಮ, ಪಾಂಡೋಮಟ್ಟಿ, ಅಂಚೆ, ಚನ್ನಗಿರಿ ತಾಲ್ಲೂಕು.

**ಚನ್ನಗಿರಿ ತಾಲ್ಲೂಕು ತಾವರೆಕೆರೆ ವ್ಯವಸಾಯ ಸೇವಾ ಸಹಕಾರ ಬ್ಯಾಂಕ್ ನಿ.**

1. ಶ್ರೀ ತಿಮ್ಮಯ್ಯ ಬಿನ್ ರುದ್ರಪ್ಪ, ಮಸಣೇಕೆರೆ ಗ್ರಾಮ, ತಾವರೆಕೆರೆ ಅಂಚೆ, ಚನ್ನಗಿರಿ ತಾಲ್ಲೂಕು.
2. ಶ್ರೀ ಚೌಡಪ್ಪ ಬಿನ್ ಚೌಡಬೋವಿ, ವೀರಾಪುರ ಗ್ರಾಮ, ದುರ್ವಿಗೆರೆ ಅಂಚೆ, ಚನ್ನಗಿರಿ ತಾಲ್ಲೂಕು.
3. ಶ್ರೀಮತಿ ಅಂಬಿಕಾ ಕೋಂ ಎಸ್.ಬಿ. ರಮೇಶ್, ಶಂಕರೀಪುರ ಗ್ರಾಮ, ತಾವರೆಕೆರೆ ಅಂಚೆ, ಚನ್ನಗಿರಿ ತಾಲ್ಲೂಕು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1120 **ಆರ್.ಎಸ್. ಹುಚ್ಚಾಚಾರಿ**

ವಿಶೇಷ ಕರ್ತವ್ಯಾಧಿಕಾರಿ, ಸಹಕಾರ ಇಲಾಖೆ.

**ಅಧಿಸೂಚನೆ**

**ಸಂಖ್ಯೆ: ಸಿಎಂಡಬ್ಲ್ಯೂ 111 ಸಿಎಸ್ಎಸ್ 2006, ಬೆಂಗಳೂರು, ದಿನಾಂಕ: 22/29ನೇ ಮಾರ್ಚ್ 2006.**

ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959 (1959ರ ಕರ್ನಾಟಕ ಅಧಿನಿಯಮ ಸಂಖ್ಯೆ 11) ರ ಕಲಂ 29ರ ಉಪ ಕಲಂ(1)ರ ಮೇರೆಗೆ ದತ್ತವಾದ ಅಧಿಕಾರಗಳನ್ನು ಚಲಾಯಿಸಿ, ಕರ್ನಾಟಕ ಸರ್ಕಾರವು ಈ ಕೆಳಕಂಡ ವ್ಯಕ್ತಿಗಳನ್ನು ಚಾಮರಾಜನಗರ ಜಿಲ್ಲೆ ಗುಂಡ್ಲುಪೇಟೆ ತಾಲ್ಲೂಕಿನ ಕಸಬ ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಬ್ಯಾಂಕ್ ನಿಯಮಿತ, ಗುಂಡ್ಲುಪೇಟೆ ಇದರ ಆಡಳಿತ ಮಂಡಳಿಗೆ ಸದಸ್ಯರುಗಳನ್ನಾಗಿ ಈ ಕೂಡಲೇ ಜಾರಿಗೆ ಬರುವಂತೆ ಮತ್ತು ಮುಂದಿನ ಆದೇಶದವರೆವಿಗೂ ನಾಮನಿರ್ದೇಶನ ಮಾಡಿದೆ.

1. ಶ್ರೀ ಬಸವಯ್ಯ ಬಿನ್ ಸಿದ್ದಯ್ಯ, ಕಂದೇಗಾಲ, ಗುಂಡ್ಲುಪೇಟೆ ತಾಲ್ಲೂಕು
2. ಶ್ರೀಮತಿ ಸಾವಿತ್ರಮ್ಮ ಕೋಂ ಸೋಮಶೇಖರ್, ಕಂದೇಗಾಲ, ಗುಂಡ್ಲುಪೇಟೆ ತಾಲ್ಲೂಕು
3. ಶ್ರೀ ಎಸ್.ಟಿ. ಮಹದೇವಪ್ಪ ಬಿನ್ ದೇವಪ್ಪ, ಸಿಂಡನಪುರ, ಗುಂಡ್ಲುಪೇಟೆ ತಾಲ್ಲೂಕು

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1229 **ಆರ್.ಎಸ್. ಹುಚ್ಚಾಚಾರಿ**

ವಿಶೇಷ ಕರ್ತವ್ಯಾಧಿಕಾರಿ, ಸಹಕಾರ ಇಲಾಖೆ.

**ಅಧಿಸೂಚನೆ**

**ಸಂಖ್ಯೆ: ಸಿಎಂಡಬ್ಲ್ಯೂ 155 ಸಿಎಸ್ಎಸ್ 2006, ಬೆಂಗಳೂರು, ದಿನಾಂಕ: 27ನೇ ಮಾರ್ಚ್ 2006.**

ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959 (1959ರ ಕರ್ನಾಟಕ ಅಧಿನಿಯಮ ಸಂಖ್ಯೆ 11) ರ ಕಲಂ 29ರ ಉಪ ಕಲಂ(1)ರ ಮೇರೆಗೆ ದತ್ತವಾದ ಅಧಿಕಾರಗಳನ್ನು ಚಲಾಯಿಸಿ, ಕರ್ನಾಟಕ ಸರ್ಕಾರವು ಶ್ರೀ ಅಣ್ಣೋಜಿರಾವ್ ಬಿನ್ ಸಂತೋಜಿರಾವ್, ಕಣವೆ ಬಿಳಚಿ, ಚನ್ನಗಿರಿ ತಾಲ್ಲೂಕು ಇವರನ್ನು ದಾವಣಗೆರೆ ಜಿಲ್ಲೆ ಚನ್ನಗಿರಿ ತಾಲ್ಲೂಕಿನ ಪ್ರಾಥಮಿಕ ಸಹಕಾರ ಕೃಷಿ ಮತ್ತು ಗ್ರಾಮೀಣ ಅಭಿವೃದ್ಧಿ ಬ್ಯಾಂಕ್ ನಿ. ಚನ್ನಗಿರಿ ಇದರ ಆಡಳಿತ ಮಂಡಳಿಗೆ ಸದಸ್ಯರನ್ನಾಗಿ ಈ ಕೂಡಲೇ ಜಾರಿಗೆ ಬರುವಂತೆ ಮತ್ತು ಮುಂದಿನ ಆದೇಶದವರೆವಿಗೂ ನಾಮನಿರ್ದೇಶನ ಮಾಡಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1086 **ಆರ್.ಎಸ್. ಹುಚ್ಚಾಚಾರಿ**

ವಿಶೇಷ ಕರ್ತವ್ಯಾಧಿಕಾರಿ, ಸಹಕಾರ ಇಲಾಖೆ.

**LAW, JUSTICE AND HUMAN RIGHTS SECRETARIAT**

**NOTIFICATION**

**No. LAW 67 LCE 06, Dated: 22nd June 2006**

In exercise of powers conferred by Section 10(1) of the Karnataka Protection of Interest of Depositors in Financial Establishment Act, (2004), the Government of Karnataka with the concurrence of the Hon'ble Chief Justice, High Court of Karnataka hereby constitutes Special Courts mentioned at Column (2) of the table below in respect of the areas specified in the corresponding entries in Column (4) and appoints the District and Sessions Judges specified in Column (3) to be the Judges of the Special Courts specified in the corresponding entries in column (2) thereof for the purpose of the said section :-

| Sl. No. | Name of the Court | Designation | Area |
|---|---|---|---|
| 1 | 2 | 3 | 4 |
| 1 | City Civil and Sessions Court, Bangalore | Principal City Civil and Sessions Judge, Bangalore City | Bangalore Metropolitan Areas |
| 2 | District and Sessions Court, Bangalore Rural | Principal District and Sessions Judge, Bangalore Rural, Bangalore | Bangalore Rural District |
| 3 | District and Sessions Court, Bagalkot | District and Sessions Judge, Bagalkot | Bagalkot District |
| 4 | District and Sessions Court, Belgaum | Principal District and Sessions Judge, Belgaum | Belgaum District |

| 1 | 2 | 3 | 4 |
|---|---|---|---|
| 5 | District and Sessions Court, Bidar | Principal District and Sessions Judge, Bidar | Bidar District |
| 6 | District and Sessions Court, Bellary | Principal District and Sessions Judge, Bellary | Bellary District |
| 7 | District and Sessions Court, Bijapur | Principal District and Sessions Judge, Bijapur | Bijapur District |
| 8 | District and Sessions Court, Chamarajanagar | Principal District and Sessions Judge, Chamarajanagar | Chamarajanagar District |
| 9 | District and Sessions Court, Chitradurga | Principal District and Sessions Judge, Chitradurga | Chitradurga District |
| 10 | District and Sessions Court, Chickmagalur | Principal District and Sessions Judge, Chickmagalur | Chikmagalur District |
| 11 | District and Sessions Court, Davanagere | Principal District and Sessions Judge, Davanagere | Davanagere District |
| 12 | District and Sessions Court, Dharwad | Principal District and Sessions Judge, Dharwad | Dharwad District |
| 13 | District and Sessions Court, Gadag | District and Sessions Judge, Gadag | Gadag District |
| 14 | District and Sessions Court, Gulbarga | Principal District and Sessions Judge, Gulbarga | Gulbarga District |
| 15 | District and Sessions Court, Hassan | Principal District and Sessions Judge, Hassan | Hassan District |
| 16 | District and Sessions Court, Haveri | Principal District and Sessions Judge, Haveri | Haveri District |
| 17 | District and Sessions Court, Dakshina Kannada, Mangalore | Principal District and Sessions Judge, Mangalore | Dakshina Kannada District, Mangalore |
| 18 | District and Sessions Court, Uttara Kannada, Karwar | District and Sessions Judge, Karwar | Uttara Kannada District, Karwar Dist. |
| 19 | District and Sessions Court, Kodagu - Madikeri | District and Sessions Judge, Kodagu - Madikeri | Kodagu District |
| 20 | District and Sessions Court, Kolar | Principal District and Sessions Judge, Kolar | Kolar District |
| 21 | District and Sessions Court, Koppal | District and Sessions Judge, Koppal | Koppal District |
| 22 | District and Sessions Court, Mandya | Principal District and Sessions Judge, Mandya | Mandya District |
| 23 | District and Sessions Court, Mysore | Principal District and Sessions Judge, Mysore | Mysore District |
| 24 | District and Sessions Court, Raichur | Principal District and Sessions Judge, Raichur | Raichur District |
| 25 | District and Sessions Court, Shimoga | Principal District and Sessions Judge, Shimoga | Shimoga District |
| 26 | District and Sessions Court, Tumkur | Principal District and Sessions Judge, Tumkur | Tumkur District |
| 27 | District and Sessions Court, Udupi | District and Sessions Judge, Udupi | Udupi District |

By Order and in the name of the Governor of Karnataka

P.R. 1061

**GANGANARASAIAH**

Under Secretary to Government (Admn-1),

Law, Justice and Human Rights Department.

